ಬೆಲೆ: ಎರಡು ಆಣೆ

# ಕರ್ಮವೀರ

ಸಂಪಾದಕರು :
ಹ. ರಾ. ಪುರೋಹಿತ ಎಂ. ಎ.

——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——

Editor
H. R. Purohit, M. A.



---( ಸಂಪುಟ ೧೯ )--- ಹುಬ್ಬಳ್ಳಿ ಸೋಮವಾರ ತಾರೀಖು ೨೬---೫---೧೯೪೭ ---( ಸಂಚಿಕೆ ೮ )---

# 'ಅಂಧಶ್ರದ್ಧೆ ಕೊನೆಯ ವರೆಗೆ ಉಳಿಯಲಾರದು'—

## ಹಿಂದೀ ಮುಸ್ಲಿಮರ ಆತ್ಮಘಾತಕ ಬೇಡಿಕೆಯ ಬಗ್ಗೆ ಲುಯಿಫಿಶರರ ವಿಚಾರಗಳು- "ಪಾಕಿಸ್ತಾನ ದೊರೆತದಿನ ಜಗತ್ತಿಗೇ ದುರ್ದಿನವಾದೀತು"

**"ಭಾರತದ ವಿಭಜನೆಯಾಗಬೇಕೆಂಬ ಇಚ್ಛೆಯೇ ಈಗ ನಡೆಯುತ್ತಿರುವ ಜಾತೀಯ ಗಲಭೆಗಳಿಗೆ ಕಾರಣವಾಗಿದೆ. ಮುಸ್ಲಿಮರದೇ ಆದ ಪ್ರತ್ಯೇಕ ರಾಜ್ಯದಿಂದ ಬಹುವಾಗಿ ಒಕ್ಕಲಿಗರಾಗಿರುವ ಹತ್ತು ಕೋಟಿ ಮುಸಲ್ಮಾನರಿಗೆ ಯಾವ ವಿಧದ ಆಧ್ಯಾತ್ಮಿಕ, ಧಾರ್ಮಿಕ, ಭಾವಿಕ ಅಥವಾ ಪ್ರಾಪಂಚಿಕ ಲಾಭವುಂಟೆಂಬುದನ್ನು ನಾನಂತೂ ತಿಳಿಯಲಾರೆ. ಮುಸಲ್ಮಾನರಿಗೆ ಅವರ ಶತ್ರುಗಳಲ್ಲದೆ ಬೇರೆ ಯಾರೂ ಪಾಕಿಸ್ತಾನವನ್ನು ಕೊಡಬಯಸರು" ಎಂದು ಪ್ರಸಿದ್ಧ ಅಮೇರಿಕನ್ ಲೇಖಕರಾದ ಲುಯಿ ಫಿಶರರು ಸಾರಿದ್ದಾರೆ.**

'ಅಂಧಶ್ರದ್ಧೆ ಕೊನೆಯವರೆಗೆ ಉಳಿಯಲಾರದು'— ಎನ್ನುತ್ತಾರೆ ಹಿಂದುಸ್ತಾನದ ಗೆಳೆಯರಾದ ಲುಯೀಫಿಶರ್ ಮಹಾಶಯರು. ತಮ್ಮ ಮತವೇ ಹೆಚ್ಚಿನದು, ಉಳಿದ ಮತದವರನ್ನು ಬಲತ್ಕಾರದಿಂದ ಸ್ವಮತಕ್ಕೆ ಸೇರಿಸಿದರೆ ದೇವರು ಮೆಚ್ಚುತ್ತಾನೆಯೆಂಬ ಭಾವನೆಯಿಂದ ಪರಮತೀಯರಮೇಲೆ ಯುದ್ಧಮಾಡುವ ಮಧ್ಯಯುಗದ ಸ್ಫೂರ್ತಿಯು ೨೦ ನೆಯ ಶತಮಾನದ ನಾಗರಿಕತೆಗೆ ಹೊಂದತಕ್ಕದ್ದಲ್ಲ. ಸಾಮಾಜಿಕರ ದೇವತಾರಾಧನೆಯ ಸ್ವಾತಂತ್ರ್ಯವನ್ನು ಒಪ್ಪದ ಸರಕಾರವು ಈ ಯುಗದಲ್ಲಿ ಕೇವಲ ಅನಾಗರಿಕವೆಂದು ಘಂಟಾಘೋಷವಾಗಿ ಹೇಳಬಹುದು. ಇದನ್ನೇ ದೃಷ್ಟಿಯಲ್ಲಿಟ್ಟುಕೊಂಡು ವಿವಿಧ ಮತಾನುಯಾಯಿಗಳು ಪರಸ್ಪರದ್ವೇಷಾಸೂಯೆಗಳಿಂದ ಕಚ್ಚಾಡುವುದನ್ನು ಕಂಡು ಹೇಸಿ ಪಂಡಿತ ನೆಹರೂರವರು ತಮ್ಮ ಆತ್ಮಚರಿತ್ರೆಯಲ್ಲಿ 'ಮತವೆಂದು ಸಂಘಟಿತವಾದ ಸಂಸ್ಥೆಗಳನ್ನು ಕಂಡರೆ ನನಗಾಗದು; ಅವುಗಳನ್ನು ಮೂಲೋತ್ಪಾಟನ ಮಾಡಬೇಕೆಂದು ನನಗೆ ಎಷ್ಟೋ ಸಲ ಎನಿಸಿದೆ' ಎಂದು ಉದ್ಗರಿಸಿದ್ದಾರೆ. ಇತಿಹಾಸವನ್ನವಲೋಕಿಸಿದರೆ ಬಹಳ ವರ್ಷಗಳಿಂದ ಹಿಂದುಸ್ತಾನವು ಧರ್ಮಾಂಧರ ಹಾವಳಿಗೆ ತುತ್ತಾಗುತ್ತ ಬಂದು ತನ್ನ ಆತ್ಮಶಕ್ತಿಯನ್ನು ಬಹಳ ಮಟ್ಟಿಗೆ ಕಳೆದುಕೊಂಡಿದೆ ಎಂಬುದು ಸ್ಪಷ್ಟವಾಗುತ್ತದೆ. ಮುಸ್ಲಿಂ ಲೀಗಿನ ಇಂದಿನ ಧೋರಣೆಯು ಧರ್ಮಾಂಧತೆಯ ಅತ್ಯಂತ ಭೀಷಣವಾದ ಮತ್ತು ಆತ್ಮಘಾತಕವಾದ ಪರಿಣಾಮಗಳಿಗೆ ಕಾರಣವಾಗಿರುವುದು ಮೇಲಿನ ಅಭಿಪ್ರಾಯಕ್ಕೆ ಅತ್ಯಾಧುನಿಕವಾದ ಮತ್ತು ಸಮರ್ಥವಾದ ದೃಷ್ಟಾಂತವೆಂಬುದು ಸರ್ವವೇದ್ಯವಾಗಿದೆ.

### ಸ್ವಾತಂತ್ರ್ಯವಾದಿಗಳಿಗೆ ವೇದನೆ

ತಿಂಗಳುಗಟ್ಟಲೆ ನಡೆಯುತ್ತ ಸಾಗಿರುವ ಜಾತೀಯ ಬಂಡಾಯಗಳಿಂದ ಲೂಯೀ ಫಿಶರರಂಥಹ ಅಂತರ್ರಾಷ್ಟ್ರೀಯ ರಾಜಕಾರಣಿಗೂ ಸ್ವಲ್ಪ ನಿರಾಶೆಯುಂಟಾಯಿತಂತೆ. ಆದರೆ ಭಾರತೀಯರ ಮೇಲಿನ ಅವರ ಪ್ರೇಮ ಮತ್ತು ವಿಶ್ವಾಸಗಳು ಅವರಿಗಾದ ಆ ನಿರಾಶೆಯನ್ನು ತಡೆಯಲು ಶಕ್ತವಾದುವಂತೆ. ಇದನ್ನು ಗಮನಿಸಿದರೆ ವರ್ಷಗಟ್ಟಲೆ ತನುಮನಧನಗಳನ್ನು ವ್ಯಯಿಸಿ ಸ್ವಾತಂತ್ರ್ಯಯಜ್ಞಕ್ಕೆ ಸರ್ವಸ್ವವನ್ನೂ ದಾನಮಾಡಿ, ವಿಘ್ನಪರಂಪರೆಗಳಿಂದ ವ್ಯಸ್ತರಾಗಿ ದಣಿದು ಸ್ವಾತಂತ್ರ್ಯ ಪ್ರಾಪ್ತಿಯು ಸಮೀಪಿಸಿ ಬಂದ ಈ ಕಾಲದಲ್ಲಿ ಮುಸ್ಲಿಂಲೀಗಿನ ಜಾತೀಯ ಸರಕಾರದ ಬೇಡಿಕೆಯನ್ನು ಕೇಳಿದ ದೇಶದ ಮುಖಂಡರಿಗೆ ಎಂತಹ ಮರ್ಮಭೇದಕ ವೇದನೆಯಾದೀತು!

### ಹೊಸ ಅಂತರ್‌ರಾಷ್ಟ್ರೀಯ ಶಕ್ತಿ

'ಬಂಡಾಯವನ್ನು ಲಕ್ಷಿಸದೆ ನಾವು ಮುಂಬರಿಯಬೇಕು' ಎಂದು ಅಜಯ್ಯವಾದ ಆತ್ಮಶಕ್ತಿಯಿಂದ ಹಿಂದುಸ್ತಾನದ ಆರ್ಥಿಕ, ಸಾಮಾಜಿಕ ಮತ್ತು ವೈಜ್ಞಾನಿಕ ಪ್ರಗತಿಗಾಗಿ ಹಲವು ವಿಧದಿಂದ ಪ್ರಯತ್ನಿಸುತ್ತಿರುವ ಪಂ. ನೆಹರೂರವರ ಕಡೆ ಲಕ್ಷ್ಯಗೊಡದ ಅಂತರ್ರಾಷ್ಟ್ರೀಯ ವ್ಯಕ್ತಿ ಯಾವನೂ ಇರಲಾರನು. ರಾಷ್ಟ್ರೀಯಪ್ರಯೋಗಶಾಲೆಗಳು, ಸಂಶೋಧನಾಲಯಗಳು, ವೈದ್ಯಾಲಯಗಳು, ಶಾಲೆಗಳು---ಇವೇ ಮೊದಲಾದ ಹಲವು ಹೊಸ ಸಂಸ್ಥೆಗಳನ್ನು ಆಗಲೇ ಬಂಗಾಲ, ಬಿಹಾರ, ದೆಹಲಿ ಮುಂತಾದ ಪ್ರಾಂತಗಳಲ್ಲಿ ಪ್ರಾರಂಭಿಸಲಾಗಿದೆ. ರಿಜರ್ವ್ ಬ್ಯಾಂಕನ್ನು ಕೂಡ ರಾಷ್ಟ್ರೀಕರಣ ಮಾಡಬೇಕೆಂದು ಕೇಂದ್ರ ಸರಕಾರವು ನಿಶ್ಚಯಿಸಿದೆ.

ಇಷ್ಟಲ್ಲದೆ ಅಂತರ್ರಾಷ್ಟ್ರೀಯ ರಂಗದಲ್ಲಿ ಹಿಂದುಸ್ತಾನದ ಪ್ರಾಧಾನ್ಯವನ್ನು ಸ್ಥಾಪಿಸಲು ಅವಿಶ್ರಾಂತವಾಗಿ ಹೆಣಗುತ್ತಿರುವ ನೆಹರೂರವರು 'ಭಾರತವು ಏಶಿಯದ ಕೇಂದ್ರವಾಗಲಿದೆ' ಎಂದು ಸಾರಿದ್ದಾರೆ.

ಈ ಮೇಲಿನ ವಿಷಯಗಳನ್ನು ಗಮನಿಸಿ 'ಶಾಂತಿಯುತವಾದ ಮಾರ್ಗದಿಂದ ಹಿಂದುಸ್ತಾನವು ಸ್ವಾತಂತ್ರ್ಯವನ್ನು ಪಡೆದು ತನ್ನ ಆರ್ಥಿಕ ಪ್ರಗತಿಯನ್ನು ಕೆಲವು ಹರದಾರಿಗಳಷ್ಟು ಮುನ್ನುಗ್ಗಿಸಿತೆಂದರೆ ಅದು ಅಂತರ್ರಾಷ್ಟ್ರೀಯ ರಾಜಕಾರಣದ ಇಡಿಯ ಸ್ವರೂಪವನ್ನೇ ಬದಲಾಯಿಸಿಬಿಡಬಹುದು' ಎಂದು ಲೂಯೀ ಫಿಶರರು ಅಭಿಪ್ರಾಯ ಪಡುತ್ತಾರೆ.

### ಅರ್ಥವಿಲ್ಲದ ಬೇಡಿಕೆ

ಪಾಕಿಸ್ತಾನದತ್ತ ದೃಷ್ಟಿಯನ್ನು ಹೊರಳಿಸಿ ಅವರು, "ಭಾರತದ ವಿಭಜನೆಯಾಗಬೇಕೆಂಬ ಅಥವಾ ಬ್ರಿಟಿಷರು ಕೊಟ್ಟು ಹೋಗಲಿರುವ ಅಧಿಕಾರದ ವಿಭಜನೆಯಾಗಬೇಕೆಂಬ ಇಚ್ಛೆಯೇ ಈಗ ನಡೆಯುತ್ತಿರುವ ಜಾತೀಯ ಗಲಭೆಗಳಿಗೆ ಕಾರಣವಾಗಿದೆ. ಮುಸ್ಲಿಮರದೇ ಆದ ಪ್ರತ್ಯೇಕ ರಾಜ್ಯದಿಂದ ಬಹುವಾಗಿ ಒಕ್ಕಲಿಗರೆನಿಸಿರುವ ಹತ್ತುಕೋಟಿ ಮುಸಲ್ಮಾನರಿಗೆ ಯಾವ ವಿಧದ ಆಧ್ಯಾತ್ಮಿಕ, ಧಾರ್ಮಿಕ, ಭಾವಿಕ ಅಥವಾ ಪ್ರಾಪಂಚಿಕ ಲಾಭವುಂಟೆಂಬುದನ್ನು ನಾನಂತೂ ತಿಳಿಯಲಾರೆ. ಪ್ರಪಂಚದ ಮಾತು ಒತ್ತಟ್ಟಿರಲಿ, ಈ ಪಾಕಿಸ್ತಾನವು ಏಸಿಯದಲ್ಲೇ ಅಷ್ಟೊಂದು ಮಹತ್ವದ ಸ್ಥಾನವನ್ನು ಪಡೆಯಲಾರದು. ಅದು ಆರ್ಥಿಕ ದುರವಸ್ಥೆಗಳಿಂದ ನರಳುವುದು. ಅದು ಮುಂಬರಿದ ರಾಜಕೀಯ ಮತ್ತು ಸಾಮಾಜಿಕ ಭಾವನೆಗಳುಳ್ಳಜನರಿಂದ ಆಳಲ್ಪಡುವ ಸುಯೋಗವನ್ನು ಪಡೆಯಲಾರದು.

"ಆದರೆ ಹಿಂದುಸ್ತಾನದಿಂದ ಪೂರ್ತಿಯಾಗಿ ಬೇರ್ಪಡಿಸಿದ ಮುಸ್ಲಿಂ ರಾಜ್ಯದ ಸ್ಥಾಪನೆಯನ್ನು ಚರ್ಚಿಸಲು ವಿರುದ್ಧ ಪಕ್ಷದವರು ಒಪ್ಪಿಗೆಯಿತ್ತುದನ್ನು ಕಂಡರೆ ಮುಸ್ಲಿಂ ಲೀಗಿನ ಪಾಕಿಸ್ತಾನದ ಬೇಡಿಕೆಯು ಅವರ ಮನಸ್ಸಿನ ಮೇಲೆ ಬಹಳ ಪರಿಣಾಮ ಮಾಡಿದೆ ಎಂದು ಹೇಳಬಹುದು. ಮುಸ್ಲಿಂ ಲೀಗಿನೊಡನೆ ಪಾಕಿಸ್ತಾನದ ಬಗ್ಗೆ ಚರ್ಚಿಸಲು ಕಾಂಗ್ರೆಸ್ಸು ಸಿದ್ಧವಾದುದು ತೀರಾ ಹೊಸದು. ಅದು ರಾಜಕೀಯ ಸಮಸ್ಯೆಗಳನ್ನು ನಾಗರಿಕ ದೃಷ್ಟಿಯಿಂದ ನೋಡುವ ಕ್ರಮವನ್ನು ಪ್ರತಿಬಿಂಬಿಸುತ್ತದೆ. ಪಾಕಿಸ್ತಾನದ ಬಗ್ಗೆ ಹಿಂದುಗಳ ಸಹಾನುಭೂತಿಯು ಎಂದೂ ಸ್ನೇಹಜನ್ಯವಿರಲಾರದು. ಕೈಗಾರಿಕೆಗಳಲ್ಲೂ ಧ್ಯೇಯ ಧೋರಣಗಳಲ್ಲೂ ಬಹಳ ಹಿಂದುಳಿದ ಮುಸಲ್ಮಾನರಿಗೆ ಪ್ರತ್ಯೇಕ ರಾಷ್ಟ್ರವನ್ನು ಅವರ ಶತ್ರುಗಳಲ್ಲದೆ ಬೇರೆ ಯಾರೂ ಕೊಡಬಯಸರು. ಆದರೆ ಪಾಕಿಸ್ತಾನಕ್ಕೆ ಬದಲಾಗಿ ಮುಂದೆ ಹತ್ತು ವರ್ಷ ಅಂತರ್ಯುದ್ಧ ನಡೆಯುವುದು ಅನಿವಾರ್ಯವಾದರೆ ಅದಕ್ಕಿಂತ ಮುಸ್ಲಿಂ ನಾಯಕರಿಗೆ ಅವರ ರಾಜ್ಯವನ್ನು ಕೊಡಲು ಯಾವುದಾದರೊಂದು ಮಾರ್ಗವನ್ನು ಹುಡುಕುವುದೇ ಮೇಲು. ಮುಸ್ಲಿಮರು ಪಾಕಿಸ್ತಾನವನ್ನು ಪಡೆದ ದಿನ ಜಗತ್ತಿಗೊಂದು ದುರ್ದಿನವೇ ಸರಿ!!"

### ಮಧ್ಯಸ್ಥಿಕೆ ವ್ಯರ್ಥ

ಲೀಗೇತರರುಕೇವಲ ಸ್ವಾರ್ಥಕ್ಕಾಗಿಪಾಕಿಸ್ತಾನ ಸ್ಥಾಪನೆಯನ್ನು ವಿರೋಧಿಸುವ ದಿಲ್ಲೆಂಬುದಕ್ಕೆ ಮೇಲಿನ ಲೂಯೀ ಫೀಶರರ ಮಾತಿಗಿಂತಹೆಚ್ಚಿನ ಸಾಕ್ಷಿಬೇಕೆ? ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಪಾಕಿಸ್ತಾನ ಪ್ರಶ್ನೆಯನ್ನು ಚಕ್ರವರ್ತಿ ನ್ಯಾಯಮಂಡಲಕ್ಕೆ ಒಪ್ಪಿಸಬೇಕೆಂದಿದ್ದಾರೆ. ಇದನ್ನು ಲೂಯೀ ಫಿಷರರು ಸಮರ್ಥಿಸುವದಿಲ್ಲ. ಅಂತಹ ನ್ಯಾಯಮಂಡಲವಿಲ್ಲ; ಮತ್ತು ಜಾಗತಿಕ ನ್ಯಾಯಾಲಯವಿದ್ದರೆ ಅದು ಕೇವಲ ರಾಜಕೀಯ. ಅದೂ ಅಲ್ಲದೆ ಪಾಕಿಸ್ತಾನವು ನ್ಯಾಯವಾದುದೋ ಅಲ್ಲವೋ ಎಂಬುದನ್ನು ನಿರ್ಣಯಿಸಲು ನ್ಯಾಯಶಾಖೆಯಲ್ಲಿ ಮತ್ತು ಕಾಯಿದೆಯಲ್ಲಿ ಯಾವ ನಿಯಮಗಳೂ ಇಲ್ಲ. ಇನ್ನು ಈಪಾಕಿಸ್ತಾನ ಪ್ರಶ್ನೆಯನ್ನು ಸಂಯುಕ್ತ ರಾಷ್ಟ್ರಗಳ ಎದುರಿಡಬೇಕೆಂದು ಹೇಳುವುದಾದರೆ ಅದು ದೊಡ್ಡ ರಾಷ್ಟ್ರಗಳ ಇಂದಿನ ಒಳಜಗಳಗಳಲ್ಲಿ ಹಿಂದುಸ್ತಾನವನ್ನು ಸಿಕ್ಕಿಸಿ ತೊಂದರೆಗೀಡು ಮಾಡುತ್ತದೆ-ಎಂದು ಫಿಶರರ ವಾದ.

ಇಷ್ಟು ಹೇಳಿ ಅವರು ತಮ್ಮ ಸಲಹೆಯನ್ನು ಮುಂದಿಡುತ್ತಾರೆ: "ಕಾಂಗ್ರೆಸ್ಸು ಮತ್ತು ಮುಸ್ಲಿಂ ಲೀಗು ತಮ್ಮ ಒಳಜಗಳವನ್ನು ತಾವೇ ಬಗೆಹರಿಸಿಕೊಳ್ಳುವುದು ಉತ್ತಮ. ಏಕೆಂದರೆ, ಬೇಕಾದರೆ ಮುಸ್ಲಿಂಲೀಗು ಪಾಕಿಸ್ತಾನವನ್ನು ತೆಗೆದುಕೊಳ್ಳಲೆಂದು ನೆಹರೂರವರೇ ಹೇಳಿದ್ದಾರೆ. ಪಾಕಿಸ್ತಾನಕ್ಕೆ ಸೇರುವ ಇಚ್ಛೆಯಿಲ್ಲದ ಇತರ ಭಾಗಗಳನ್ನು ಪಾಕಿಸ್ತಾನಕ್ಕೆ ಸೇರಿಸಬಾರದೆಂಬುದೇ ಅವರು ಹಾಕಿದ ಕರಾರು. ಆದರೆ ಮುಸ್ಲಿಂ ಲೀಗು ಮುಸ್ಲಿಮರಿಗೆ ಸ್ವಯಂನಿರ್ಣಯಾಧಿಕಾರವನ್ನು ಕೇಳಿ ಹಿಂದು ಮತ್ತು ಶೀಖರಿಗೆ ಅದನ್ನು ಕೊಡಬಾರದೆಂದು ಹೇಳುವುದರಲ್ಲಿ ಎಳ್ಳಷ್ಟೂ ನ್ಯಾಯವಿಲ್ಲ. ಒಟ್ಟಿನ ಮೇಲೆ ಪಾಕಿಸ್ತಾನದ ವಿಷಯವಾಗಿ ಮಾತುಕತೆನಡೆಸಲು ಕಾಂಗ್ರೆಸ್ಸು ಒಪ್ಪಿಗೆಯಿತ್ತುದೇ ಗಲಭೆಗಳನ್ನು ನಿಲ್ಲಿಸಲು ಸಾಕಾಗಬೇಕು."

ಆದರೆ ಕಾಂಗ್ರೆಸ್ಸಿನ ಸಭ್ಯತೆ, ಸಂಧಾನ ಪ್ರಯತ್ನ-ಇವುಗಳಿಂದ ದೇಶದಲ್ಲಿ ಗಲಭೆ ನಿಂತೀತೆಂದು ಬಯಸಿದವರು ಸದ್ಯಕ್ಕೆ ನಿರಾಶರಾಗಿರಬೇಕಾಗಿದೆ. ವಿಶೇಷವಾದ ಕಾಯಿದೆಗಳನ್ನು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಜಾರಿಗೆ ತರುವದು ಇನ್ನೂ ನಿಂತಿಲ್ಲ. ಎಲ್ಲ ಅಪರಾಧವನ್ನೂ ಗುಂಡರ ತಲೆಗೆ ಕಟ್ಟುವುದು ಬಹು ಸುಲಭವಾದ ಕೆಲಸ. ಆದರೆ ಅವರಿಗೆ ದ್ರವ್ಯ ಮತ್ತು ಅಸ್ತ್ರಶಸ್ತ್ರಗಳನ್ನೊದಗಿಸಿ ಬೆಂಬಲಿಗರಾಗಿ ನಿಲ್ಲುವ ಗೋಮುಖವ್ಯಾಘ್ರರಾದ ರಾಜಕೀಯನೇತಾರರಿಗೆ ಸದ್ಬುದ್ಧಿ ಬಂದಹೊರತು ದೇಶದಲ್ಲಿ ಶಾಂತಿಯುಂಟಾಗಲಾರದು.

ಇದರ ಮೇಲೆ ಮತ್ತೊಂದು ಸಲಹೆಯನ್ನು ಪ್ರೊ. ಕೆ. ಕೆ. ಭಟ್ಟಾಚಾರ್ಯರು ಕೊಟ್ಟಿರುತ್ತಾರೆ. ಮುಖಂಡರಿಗೆ ಸದ್ಬುದ್ಧಿ ಬರುವವರೆಗೆ ಕೈಕಟ್ಟಿಕೊಂಡು ಕಾದು ಕುಳಿತಿರುವುದು ಗ್ರಾಹ್ಯವಲ್ಲ. ಆದುದರಿಂದ ಅವರ ಹೇಳಿಕೆಯ ಪ್ರಕಾರ ಬ್ರಿಟಿಶರು ಈಗಿನ ನಡುಗಾಲ ಸರಕಾರಕ್ಕೆ ಒಳಆಡಳಿತದಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ಕೂಡಲೆ ಕೊಟ್ಟು ಬಿಡಬೇಕು. ಇಲ್ಲದಿದ್ದರೆ ರೋಂನಗರಕ್ಕೆ ಬೆಂಕಿಹತ್ತಿ ಉರಿಯುತ್ತಿದ್ದಾಗ ನೀರೋ ದೊರೆಯು ಪಿಟೀಲು ಬಾರಿಸುತ್ತಿದ್ದ ಹಾಗೆ ರಾಜ್ಯಭಾರ ಮಾಡುತ್ತಿರುವ ಲೀಗ ಸರಕಾರಗಳ ಹಾವಳಿಯಿಂದ ದೇಶ ತತ್ತರಿಸಿಹೋದೀತೆನ್ನುತ್ತಾರೆ. ಈ ಸಲಹೆಯು ಸೂಕ್ತವೆಂದು ಯಾರಾದರೂ ಒಪ್ಪಬೇಕು. ಆದರೆ ಈಗ ಹಿಂದುಸ್ತಾನದ ವಿಭಜನೆಯ ದೃಷ್ಟಿಯಿಂದ ತಯಾರಿಸಿದ ಯೋಜನೆಯನ್ನು ತೆಗೆದುಕೊಂಡು ಲಂಡನ್ನಿಗೆ ಹೋದ ವಾಯಿಸರಾಯರು ಏನು ಮಾಡಿಕೊಂಡು ಬರುವರೊ ತಿಳಿಯದು. ಬ್ರಿಟಿಷ ಮಂತ್ರಿಮಂಡಲವೇನೊ ಭಾರತದ ವಿಭಜನೆಗೆ, ಅದರಲ್ಲೂ ಸೈನ್ಯದ ವಿಭಜನಗೆ, ವಿರುದ್ಧವಿದೆಯೆಂದು ಸುದ್ದಿ ಬಂದಿದೆ. ಇದು ನಿಜವಿದ್ದರೆ ಪಾಕಿಸ್ತಾನ ಭೂತದ ಅಂತಿಮ ವಿಸರ್ಜನೆಗೆ ಬಹಳ ಕಾಲ ಹಿಡಿಯಲಾರದು.

ಸಿಂಧ ಬಂಗಾಲಗಳು ಸ್ವತಂತ್ರ ಪ್ರಾಂತವಾಗ ಬಯಸುತ್ತಿವೆ. ಗಡಿನಾಡಿಗೆ ಪಾಕಿಸ್ತಾನ ಬೇಡ. ಸುಹ್ರವರ್ದಿಯವರಿಗೂ ಜಿನ್ನಾರವರಿಗೂ ತಕರಾರು ನಡೆದಿದೆ. ಇದೊಂದು ಶುಭೋದಯವೆನ್ನಬಹುದೇ ?

ಅನೇಕ ಸಂಸ್ಥಾನಗಳೂ ಹಿಂದುಸ್ತಾನವನ್ನು ಶತಶಃ ವಿಚ್ಛೇದಿಸುವ ಆಟದಲ್ಲಿ ಭಾಗವಹಿಸಿವೆ. ಹೈದರಾಬಾದದಲ್ಲಿ ಈಚೆಗೆ ಕೆರೆಯ ಮರೆಯಲ್ಲಿ ನಡೆಯುತಿರುವ ಸಂಗತಿಗಳು ಮುಸ್ಲಿಂಲೀಗು ಕೇವಲ ಪಾಕಿಸ್ತಾನದಿಂದ ಸಂತುಷ್ಟವಾಗುವದಿಲೆಂದು ಸ್ಪಷ್ಟವಾಗಿ ತೋರಿಸುತ್ತವೆ.

ಲೂಯೀ ಫಿಶರರು ಹೇಳುವಂತೆ ಜಗತ್ತು ಹಿಂದುಸ್ತಾನದ ಕಡೆ ಹೆದರಿಕೆಯಿಂದ ಮತ್ತು ಆಸೆಯಿಂದ ನೋಡುತ್ತಿದೆ.

ಹಿಂದುಸ್ತಾನವನ್ನು ವಿಭಜಿಸಬೇಕೆಂಬ ಪಕ್ಷದವರಿಗೆ ಸದ್ಬುದ್ಧಿಯುಂಟಾಗಿ ಅವರು ತಮ್ಮ ಹಟವನ್ನು ಬಿಟ್ಟರೆ ಹಿಂದುಸ್ತಾನಕ್ಕಿರುವ ಕೀರ್ತಿಶಾಶ್ವತವಾಗಿ ನಿಲ್ಲಬಹುದು. ಧರ್ಮಾಂಧತೆಯನ್ನು ಸಾಧನವಾಗಿಟ್ಟುಕೊಂಡು ರಾಜಕೀಯ ಸ್ವಾರ್ಥವನ್ನು ಸಾಧಿಸಲೆಳಸುವ ಜಿನ್ನಾ ಪ್ರಭೃತಿಗಳಿಗೆ ಇನ್ನಾದರೂ ನಿಜಸ್ಥಿತಿಯ ಅರಿವಾಗಿ ಹಿಂದುಸ್ತಾನದ ಸರ್ವಪಕ್ಷೀಯ ಹಿತದ ಸಾಧನೆಗೆ ಅನುಕೂಲ ಒದಗಿಸಿ ಕೊಡುವ ಮನಸ್ಸು ಬರಲೆಂದು ಪ್ರತಿಯೊಬ್ಬ ಭಾರತೀಯನೂ ಲೂಯೀ ಫಿಷರರೊಡನೆ ಆಶಿಸದಿರಲಾರನು.

# ಜರ್ಮನಿಯಲ್ಲಿ ಭಾರತೀಯರು

## ಜರ್ಮನಿಯಲ್ಲಿ ೨೫ ವರ್ಷ ವಾಸಿಸಿದ್ದ ಕನ್ನಡಿಗರೊಬ್ಬರ ಅನುಭವ

### ಹಿಂದೀಯರ ಬಗ್ಗೆ ಜರ್ಮನರಲ್ಲಿದ್ದ ಗೌರವ

[ಶ್ರೀ ನರಹರಿ ಗೋವಿಂದ ಗಣಪತಿಯವರು ಹುಬ್ಬಳ್ಳಿಯವರಿದ್ದು ಅವರ ಬಾಲ್ಯಶಿಕ್ಷಣವು ಹುಬ್ಬಳ್ಳಿಯಲ್ಲಿಯೇ ಆಯಿತು. ಅವರು ಮೊದಲು ಜರ್ಮನಿಗೆ ಹೋದುದು ೧೯೨೧ ರ ಕೊನೆಯಲ್ಲಿ. ಅಲ್ಲಿದ್ದುಕೊಂಡು ಹಿಂದುಸ್ಥಾನ ಮತ್ತು ಜರ್ಮನಿಯ ನಡುವೆ ವ್ಯಾಪಾರ ಹಾಗು ಸಾಂಸ್ಕೃತಿಕ ಸಂಬಂಧವು ಬೆಳೆಯುವಂತೆ ಯತ್ನಿಸುತ್ತಿದ್ದರು. ಮಹಾಯುದ್ಧವಾಗುತ್ತಿದ್ದಾಗ ಜರ್ಮನಿಯಲ್ಲಿಯೇ ಇದ್ದು ಸುಭಾಷಬೋಸರು ಜರ್ಮನಿಗೆ ಬಂದಾಗ ಅವರನ್ನು ಕೂಡಿಕೊಂಡು ಅಲ್ಲಿದ್ದ ಭಾರತೀಯರನ್ನು ಸಂಘಟಿಸಲು ತೊಡಗಿದರು. ಯುದ್ಧ ಮುಗಿದನಂತರ ಉಳಿದ ನಮ್ಮ ದೇಶಬಾಂಧವರ ಸಂಗಡ ಬಂಧಿಸಲ್ಪಟ್ಟರು. ಅವರ ಕೆಲವು ಮಿತ್ರರ ಹಾಗು ನಡುಗಾಲ ಸರಕಾರದ ಪ್ರಯತ್ನದಿಂದ ಕಳೆದ ತಿಂಗಳು ಬಿಡುಗಡೆಯಾಗಿ ಭಾರತಕ್ಕೆ ಬಂದರು.

ಶ್ರೀ ಗಣಪತಿಯವರು ಜರ್ಮನಿಯೊಂದಲ್ಲದೆ ಯುರೋಪ ಖಂಡವನ್ನೆಲ್ಲಾ ಅಡ್ಡಾಡಿರುವರು. ಚೀನ ಅಮೇರಿಕೆಗಳನ್ನು ಸಂದರ್ಶಿಸಿರುವರು. ಮೊನ್ನೆ ಭಾರತಕ್ಕೆ ಮರಳಿದ ಮೇಲೆ ಅವರು ನಡುಗಾಲ ಸರಕಾರದ ಉಪಾಧ್ಯಕ್ಷರಾದ ಪಂಡಿತ ಜವಾಹರಲಾಲರನ್ನು ಭೆಟ್ಟಿಯಾಗಲು ದೆಹಲಿಗೆ ಬಂದಿದ್ದಾಗ ನಮ್ಮ ಪತ್ರಿಕೆಯ ವಿಶೇಷ ಪ್ರತಿನಿಧಿಗಳು ಅವರ ಭೆಟ್ಟಿ ತೆಗೆದುಕೊಂಡು ಜರ್ಮನಿಯಲ್ಲಿನ ಅವರ ಅನುಭವಗಳ ಬಗ್ಗೆ ಪ್ರಶ್ನಿಸಿದರು.]

ಅವರು ಪಟ್ಟ ಅನುಭವ ಹಾಗು ಕಂಡ ಸಂಗತಿಗಳು ಕೆಳಗಿನಂತಿವೆ:

"ನಾನು ಮೊದಲು ಜರ್ಮನಿಗೆ ಹೋದದ್ದು ೧೯೨೧ ರ ಕೊನೆಯಲ್ಲಿ. ಗಾಂಧೀಜಿಯವರ ನವಜೀವನ ಮುದ್ರಣಾಲಯಕ್ಕೆ ಯಂತ್ರಗಳನ್ನು ತರುವ ಉದ್ದೇಶದಿಂದ ಆಗ ನಾನು ಜರ್ಮನಿಗೆ ಹೋದವನು ಅಲ್ಲಿಯೆ ಉಳಿದೆ. ಡಾ. ಸಾವರ್ಕರರ ಸಮಕಾಲೀನರಾದ ಶ್ರೀ ವೀರೇಂದ್ರನಾಥ ಚಟ್ಟೋಪಾಧ್ಯಾಯರ ನೇತೃತ್ವದಲ್ಲಿ ಮೊದಲನೆಯ ಮಹಾಯುದ್ಧದ ಕಾಲಕ್ಕೆ ಸ್ಥಾಪಿತವಾಗಿದ್ದ ಇಂಡಿಯನ್ ಇನ್‌ಫರ್ಮೇಶನ್ ಬ್ಯೂರೋದಲ್ಲಿ ಸೇರಿ ಕಾರ್ಯ ಮಾಡುತ್ತಿದ್ದೆ. ಜೊತೆಗೇ 'ಗಣಪತಿ ಮತ್ತು ಕಂಪನಿ' ಎಂಬ ಹೆಸರಿನಿಂದ ಸ್ವತಂತ್ರನಾಗಿ ದಂಧೆ ಪ್ರಾರಂಭಿಸಿದೆನು. ಇಂದಿಗೂ ಹ್ಯಾಂಬರ್ಗದಲ್ಲಿ ನನ್ನ ಮನೆಗೆ ಇರುವದು. ಈ ೨೫ ವರುಷಗಳ ಅವಧಿಯಲ್ಲಿ ವರುಷೆರಡುವರುಷಗಳಿಗೊಮ್ಮೆ ಹಿಂದುಸ್ಥಾನಕ್ಕೆ ಬಂದು ಹೋಗುತ್ತಿದ್ದೆ. ನಾನು ಕಳೆದ ಸಲ ಹಿಂದುಸ್ಥಾನಕ್ಕೆ ಬಂದುದು ೧೯೩೯ ರಲ್ಲಿ ಅಂದರೆ ಎರಡನೆಯ ಮಹಾಯುದ್ಧ ಪ್ರಾರಂಭವಾಗುವದಕ್ಕೆ ಕೆಲವೇ ತಿಂಗಳ ಮೊದಲು. ಜರ್ಮನಿಯು ಯುದ್ಧಾತುರವಾಗಿರುವದೆಂದೂ ಜಾಗತಿಕ ಯುದ್ಧ ಪ್ರಾರಂಭವಾಗದೆ ಗತ್ಯಂತರವಿಲ್ಲವೆಂದೂ ಗೊತ್ತಿದ್ದರೂ ನಾನು ಪುನಃ ಜರ್ಮನಿಗೆ ಮರಳಿದೆನು.

#### ಹಿಂದೀಯರಿಗೆ ಆಧಾರ

"ಯುದ್ಧ ಪ್ರಾರಂಭವಾಗುವ ಮೊದಲು ಜರ್ಮನಿಯಲ್ಲಿ ಬಹಳವೆಂದರೆ ನೂರರವರೆಗೆ ಭಾರತೀಯರಿದ್ದಿರಬಹುದು. ಜರ್ಮನಿಯಲ್ಲಿ ನಾಝೀವಾದ ಪ್ರಾಬಲ್ಯಕ್ಕೆ ಬರುವ ಮೊದಲಾಗಲಿ ಹಿಟ್ಲರನು ಅಧಿಕಾರಕ್ಕೆ ಬಂದ ನಂತರವಾಗಲಿ ಜರ್ಮನಿಯಲ್ಲಿನ ಹಿಂದೀಯರ ಹಿತ ಸಂರಕ್ಷಣೆಗಳಿಗೆ ಧಕ್ಕೆ ಬರಲಿಲ್ಲ. ಜರ್ಮನಿಯ ಪಂಡಿತರಿಗೆ ಭಾರತೀಯ ಸಂಸ್ಕೃತಿ ಮತ್ತು ಸಂಸ್ಕೃತ ಭಾಷೆ ಇವುಗಳ ಮೇಲಿದ್ದ ಪ್ರೀತಿ ಗೌರವಗಳ ಫಲವಾಗಿ ಹಿಂದೀಯರು ಜರ್ಮನಿಯಲ್ಲಿ ಬಹಳ ಆದರದಿಂದ ಕಾಣಲ್ಪಡುತ್ತಿದ್ದರು.

"ಹಿಂದೀಯರ ಮೇಲಿದ್ದ ಈ ಆದರ ಭಾವ ಯುದ್ಧ ಪ್ರಾರಂಭವಾದ ಮೇಲೆ ಸಹ ಬದಲಾಗಲಿಲ್ಲ. ಯುದ್ಧಕಾಲದಲ್ಲಿ ಇತರ ಜರ್ಮನರಿಗಿದ್ದ ಎಲ್ಲ ಸವಲತ್ತುಗಳೂ ಅಲ್ಲಿದ್ದ ಹಿಂದೀಯರಿಗಿದ್ದವು. ಊಟ ಆಹಾರ ಉಡಿಗೆ ತೊಡಿಗೆ ಇತ್ಯಾದಿಗಳ ಸರಕಾರಿ ನಿಯಂತ್ರಣದಲ್ಲಿ ಎಲ್ಲರಂತೆಯೇ ಹಿಂದೀಯರೂ ಸರಿ ಪಾಲುದಾರರಾಗಿದ್ದರು. ಆದರೆ ಜರ್ಮನರಂತೆ ಹಿಂದೀಯರು ಸೈನ್ಯದಲ್ಲಿ ಸೇರಬೇಕಾದ ನಿರ್ಬಂಧವಿರಲಿಲ್ಲ. ಜರ್ಮನಿಯ ಸಲುವಾಗಿ ಹಿಂದೀಯರ ಕೈಯಿಂದ ಕೆಲಸ ಮಾಡಿಸಿಕೊಳ್ಳಲು ಯಾವ ಒತ್ತಾಯವನ್ನೂ ಜರ್ಮನ ಸರಕಾರ ಮಾಡಲಿಲ್ಲ. ಇಷ್ಟೇ ಏಕೆ, ಜರ್ಮನರ ಶಕ್ತಿಯು ಕುಂಠಿತವಾಗುವ ಹೊತ್ತಿಗೆ ಸುಭಾಷರ ಆಗಮನದ ಪರಿಣಾಮವಾಗಿ ಜರ್ಮನಿಯಲ್ಲಿ ಹೆಚ್ಚಿನ ಯುದ್ಧಶಿಕ್ಷಣ ಪಡೆದ ಹಿಂದೀ ಪಡೆಯಿತ್ತು; ಆಗ ಸಹ ಜರ್ಮನ್ ಸರಕಾರ ಹಿಂದೀ ಸೈನ್ಯದ ಸಹಕಾರ ಬೇಡಲಿಲ್ಲ.

#### ಬೋಸರ ಆಗಮನ

"೧೯೪೧ ರಲ್ಲಿ ಸುಭಾಷಚಂದ್ರ ಬೋಸರು ಜರ್ಮನಿಗೆ ಬಂದರು. ಹಿಂದುಸ್ಥಾನದಲ್ಲಿಯೇ ನನಗೆ ಬೋಸರ ಪರಿಚಯವಾಗಿತ್ತು. ಬೋಸರು ಜರ್ಮನಿಗೆ ಬಂದಾಗ ನಾನು ಅವರೊಡನೆ ಕೂಡಿಕೊಂಡೆ. ಆ ಸಮಯದಲ್ಲಿ ನೂರಾರು ಹಿಂದೀ ಯುದ್ಧಕೈದಿಗಳು ಜರ್ಮನಿಯಲ್ಲಿದ್ದರು. ಬೋಸರ ಪ್ರಯತ್ನದಿಂದ ಅವರ ಬಿಡುಗಡೆಯಾಯಿತು. ಇವರೆಲ್ಲರಿಗೂ ಉತ್ತಮ ಯೋಧ ಶಿಕ್ಷಣವನ್ನು ಕೊಟ್ಟರೆ ಮುಂದೆ ಅನುಕೂಲವಾಗುವದೆಂದು ನೆನಸಿ ಆ ಬಗ್ಗೆ ಜರ್ಮನ ಸರಕಾರದ ಸಹಕಾರವನ್ನು ಬೋಸರು ಪಡೆದುಕೊಂಡರು. ಒಂದೆರಡು ನೂರು ಸೈನಿಕರಿಂದ ಪ್ರಾರಂಭವಾದ ಈ ಕಾರ್ಯ ಕೊನೆಗೆ ೪೦೦೦ ದಷ್ಟು ಸೈನಿಕರ ಒಂದು ಸುಸಜ್ಜಿತ ಹಾಗು ಸುಸಂಘಟಿತ ಗುಂಪಾಯಿತು. ಇದೇ ಹೊತ್ತಿಗೆ ಅಲ್ಲಿ ಸ್ವತಂತ್ರ ಹಿಂದುಸ್ಥಾನ ಸರಕಾರವನ್ನು ಸ್ಥಾಪಿಸಲಾಯಿತು ಮತ್ತು ಸ್ವತಂತ್ರ ಹಿಂದುಸ್ಥಾನ ರೇಡಿಯೋ ಪ್ರಾರಂಭವಾಯಿತು.

"ಸ್ವತಂತ್ರ ಹಿಂದುಸ್ಥಾನದ ರೇಡಿಯೋವನ್ನು ನಾನು ಮತ್ತು ಹಲವು ಮಿತ್ರರು ನಡೆಸುತ್ತಿದ್ದೆವು. ನಮ್ಮ ಆಕಾಶವಾಣಿಯು ಬರ್ಲಿನ ಕೇಂದ್ರಕ್ಕಿಂತ ಭಿನ್ನವಿತ್ತು. ನಮ್ಮ ಕಾರ್ಯಕ್ರಮದಲ್ಲಿ ಜರ್ಮನ ಸರಕಾರದ ಕೈವಾಡ ಎಳ್ಳಷ್ಟೂ ಇರಲಿಲ್ಲ. ನಾವೇ ನಮ್ಮ ಭಾಷಣ ಇತ್ಯಾದಿಗಳು ಆಕಾಶವಾಣಿಯ ಮೂಲಕ ಪ್ರಸಾರವಾದಮೇಲೆ ಅದರ ನಕಲನ್ನು ಮಾಹಿತಿಗೆಂದು ಅವರಿಗೆ ಕಳಿಸಿಕೊಡುತ್ತಿದ್ದೆವು. ಯಾವ ರೀತಿಯಿಂದಲೂ ನಮ್ಮ ಮೇಲೆ ನಿರ್ಬಂಧವಿರಲಿಲ್ಲ. ಸ್ವತಂತ್ರ ಹಿಂದುಸ್ಥಾನ ಸರಕಾರ ಸ್ಥಾಪಿಸಿದ ಕೂಡಲೇ ಜರ್ಮನ ಸರಕಾರವು ಪರರಾಷ್ಟ್ರದ ಸರಕಾರೀ ಪ್ರತಿನಿಧಿಗಳನ್ನು ಕಾಣುವಷ್ಟು ಗೌರವದಿಂದ ನಮ್ಮ ಸಂಗಡ ವ್ಯವಹರಿಸಿತು. ಹೆಚ್ಚಿನ ಸವಲತ್ತುಗಳು ನಮಗೆ ಕೊಡಲಾದವು. ನಮ್ಮ ಹಿಂದೀ ಬಾಂಧವರಿಗೆ ಕೊಡುತ್ತಿದ್ದ ಸೈನಿಕ ಶಿಕ್ಷಣದ ವ್ಯವಸ್ಥೆ, ಉಡಿಗೆತೊಡಿಗೆ ಮತ್ತು ಆಯುಧಗಳ ಪೂರೈಕೆ ಇವನ್ನು ಜರ್ಮನ ಸರಕಾರ ಮಾಡುತ್ತಿತ್ತು. ಜರ್ಮನಿಯು ತನ್ನಲ್ಲಿದ್ದ ಹಿಂದೀಯರೊಡನೆ, ತಾನು ತೊಂದರೆಯಲ್ಲಿದ್ದರೂ ಬಹು ಔದಾರ್ಯದಿಂದ ನಡೆದುಕೊಂಡಿತು.

#### ಜರ್ಮನರ ಕೈಗೊಂಬೆಗಳಿದ್ದಿಲ್ಲ

"ಜರ್ಮನಿಯಲ್ಲಿನ ಹಿಂದೀಯರು ಜರ್ಮನರನ್ನು ಸೇರಿಕೊಂಡು ದೇಶದ್ರೋಹಿಗಳಾದರೆಂಬುದು ಅಪಪ್ರಚಾರವಿದೆ. ಪೂರ್ವ ಏಶಿಯಾದಲ್ಲಿನ ಆಝಾದ ಹಿಂದ ಫೌಜದವರಷ್ಟೇ ಜರ್ಮನಿಯಲ್ಲಿದ್ದ ಹಿಂದೀಯರಾದರೂ ರಾಷ್ಟ್ರಪ್ರೇಮಿಗಳಿರುವರು. ದೆಹಲಿಯ ಕೆಂಪುಕೋಟೆಯಲ್ಲಿ ನಡೆದ ಆಝಾದ ಹಿಂದ ಫೌಜ ಖಟ್ಲೆಗಳಿಂದ ಆಝಾದ ಹಿಂದ ಫೌಜವು ಪ್ರಾಮುಖ್ಯಕ್ಕೆ ಬಂತು. ಜರ್ಮನಿಯಲ್ಲಿನ ಸ್ವತಂತ್ರ ಹಿಂದೀ ಸೈನ್ಯವು ಮರೆಯಲ್ಲಿಯೇ ಉಳಿಯಿತು. ಆದರೆ ಜರ್ಮನಿಯಲ್ಲಿನ ಭಾರತೀಯರು ಎಂದೂ ಜರ್ಮನ ಸರಕಾರದ ಗುಲಾಮರಾಗಿರಲಿಲ್ಲ. ನಾವು ಜರ್ಮನಿಯಲ್ಲಿ ಪೂರ್ಣ ಸ್ವತಂತ್ರರಿದ್ದೆವೆಂಬುದು ಮೇಲೆ ತಿಳಿಸಿದ ವಿಷಯಗಳಿಂದ ಸ್ಪಷ್ಟವಾಗುವದು. ಜರ್ಮನಿಯ ಸಲುವಾಗಿ ಎಂದೂ ನಾವು ಎಳ್ಳಷ್ಟೂ ನಮ್ಮ ರೇಡಿಯೋದಲ್ಲಿ ಪ್ರಚಾರಮಾಡಲಿಲ್ಲ. ನಮ್ಮ ಪ್ರಚಾರ ಹಾಗು ಕಾರ್ಯಗಳು ಬ್ರಿಟಿಶರ ವಿರೋಧಿ ಮತ್ತು ಆಸ್ವರಮಟ್ಟಿಗೆ ಜರ್ಮನರ ಪರವಾಗಿ ಮಾತ್ರವಿದ್ದವು—ಅಷ್ಟೇ.

ಸುಭಾಷ ಬೋಸರು ೧೯೪೩ ರ ಫೆಬ್ರುವರಿಯಲ್ಲಿ ಜರ್ಮನಿಯನ್ನು ಬಿಟ್ಟು ಜಪಾನಕ್ಕೆ ಪ್ರಯಾಣ ಬೆಳೆಸಿದರು. ಮುಂದೆ ಜರ್ಮನಿಯಲ್ಲಿನ ಕಾರ್ಯ ನಮ್ಮ ಮೇಲೆಯೇ ಬಿತ್ತು.

#### ಬಂಧನ ಮತ್ತು ಬಿಡುಗಡೆ

"ಯುದ್ಧದ ನಂತರ ನಮ್ಮ ಪರಿಸ್ಥಿತಿಯಾದರೂ ಜರ್ಮನರಂತೆಯೇ ಆಯಿತು. ಜರ್ಮನರಂತೆ ಹಿಂದೀಯರಾದರೂ ಬಂಧಿಸಲ್ಪಟ್ಟು ಮುಳ್ಳುಬೇಲಿಗಳ ನಡುವೆ ಇಡಲ್ಪಟ್ಟರು. ನನ್ನನ್ನು ಮೇ ೧೯೪೫ ರ ವರೆಗೆ ವೆಸ್ಟಫಾಲಿಯಾ ಪ್ರಾಂತದ ಪ್ಯಾಡರಬೋರ್ನದಲ್ಲಿನ ಬಂದೀಖಾನೆಯಲ್ಲಿಟ್ಟಿದ್ದರು. ೧೯೪೬ ರ ಫೆಬ್ರುವರಿ ತಿಂಗಳಿಂದಲೇ ಒಬ್ಬೊಬ್ಬರನ್ನಾಗಿ ಹಿಂದೀಯರನ್ನು ಬಿಡುಗಡೆ ಮಾಡಿ ಹಿಂದುಸ್ಥಾನಕ್ಕೆ ಕಳಿಸುವದು ಪ್ರಾರಂಭವಾಗಿತ್ತು. ನನ್ನನು ಜೈಲಿನಿಂದ ಬಿಡುಗಡೆ ಮಾಡಿದ ಮೇಲೆ ಹ್ಯಾನೊವರ್ ಶಹರದಲ್ಲಿ ಸ್ಥಾನಬದ್ಧನನ್ನಾಗಿ ಇಡಲಾಗಿತ್ತು. ನನಗೆ ಕೊಡಲಾಗಿದ್ದ ಅರ್ಜಿ ಚೀಟಿಯಲ್ಲಿ ನಾನು 'ಟರ್ಮಿನ್ಯಾಲ್ದೆ' ಎನ್ನುವ ಶಬ್ದ ಕೆಲಸ ಮಾಡಲು ಅರ್ಹನೆಂದು ಬರೆದಿದ್ದರು! ಆದರೂ ಕೆಲವು ಜರ್ಮನ ಮಿತ್ರರ ಸಹಾಯದಿಂದ ಆ ಕೆಲಸ ಈ ಕೆಲಸ ಮಾಡಿ ಹೊಟ್ಟೆ ತುಂಬಿಕೊಳ್ಳುತ್ತಿದ್ದೆನು. ಬಿಡುಗಡೆಯಾಗುವ ನನ್ನ ಪಾಳಿ ಒಂದೆರಡು ಸಲ ಬಂದು ಹೋಯಿತು. ಕೊನೆಗೆ ಅನಿಶ್ಚಿತತೆಯಿಂದ ಕಳೆದ ತಿಂಗಳ ಮಧ್ಯದಲ್ಲಿ ನಾನು ಜರ್ಮನಿಯಲ್ಲಿ ಬಿಟ್ಟೆನು.

ಜರ್ಮನರ ಇಂದಿನ ರಾಷ್ಟ್ರೀಯ ಜೀವನವು ಅತ್ಯಂತ ಶೋಚನೀಯ ಸ್ಥಿತಿಯನ್ನು ಮುಟ್ಟಿರುತ್ತದೆ. ಪರಿಗೆ ಜರ್ಮನಿಯಲ್ಲಿ ಆಹಾರದ ನಿಯಂತ್ರಣ ಬಹು ವ್ಯವಸ್ಥಿತವಾಗಿ ನಡೆಯುತ್ತಿದ್ದು ಈಗ ಆಹಾರ ಅರಿವೆ ಮುಂತಾದ ಅತ್ಯಾವಶ್ಯಕ ವಸ್ತುಗಳಿಗಾಗಿ ಅಕಾಶ ಪಾತಾಳಗಳನ್ನು ಒಂದು ಮಾಡಬೇಕಾಗಿದೆ.

#### ಜರ್ಮನಿಯ ದುರ್ಗತಿ

"ಯುದ್ಧಾನಂತರದ ಜರ್ಮನಿಯು ರಶಿಯನ್, ಬ್ರಿಟಿಶ, ಅಮೇರಿಕನ್ ಪ್ರದೇಶಗಳಾಗಿ ಹರಿದುಹೋಗಿರುವದು. ರಶಿಯನ್ ಪ್ರದೇಶದಲ್ಲಿನ ಜರ್ಮನರ ಸುದ್ದಿಯೇ ಗೊತ್ತಾಗುವದಿಲ್ಲ. ಬೇರೆ ಭಾಗಗಳಿಂದ ಅಲ್ಲಿ ಹೋಗಿ ಬರಲು ಅವಕಾಶವೇ ಇಲ್ಲ. ಬ್ರಿಟಿಶ ಭಾಗದಲ್ಲಿ ಹಿಂದುಸ್ಥಾನ ರಾಜ್ಯಪದ್ಧತಿಯ ಪ್ರಕಾರ ರಾಜ್ಯ ನಡೆಸಿರುವರು.

"ಈಸಲದ ಪರಿಸ್ಥಿತಿ ಕಳೆದ ಯುದ್ಧಾನಂತರದ ಪರಿಸ್ಥಿತಿಗಿಂತ ಭಿನ್ನವಿರುವದು. ಮೊದಲನೆಯ ಮಹಾಯುದ್ಧದಲ್ಲಿ ಸೋತ ಜರ್ಮನ ಸೈನಿಕನು ಮನೆಗೆ ಹಿಂತಿರುಗಿದಾಗ ಅವನ ಮನೆ ಮಠಗಳು ಅಂಗಡಿ ಕಾರ್ಖಾನೆಗಳು ಸಂರಕ್ಷಿತವಿದ್ದವು. ಬಂದ ಕೂಡಲೇ ತನ್ನ ದೇಶದ ಪುನರುತ್ಥಾನದ ಕಡೆಗೆ ಅವನು ಧಾವಿಸಿದ. ಬೇಕಾದ ಸಾಮಗ್ರಿಗಳೆಲ್ಲವೂ ಸಿದ್ಧವಿದ್ದವು. ಈ ಸಲ ನೆಲಸಮವಾಗಿ ಜರ್ಮನ ಯುವಕನು ಸೋತು ತನ್ನ ಮನೆಗೆ ಹಿಂತಿರುಗಲಾರ. ತನ್ನ ಶತ್ರುಗಳಿಗಿದ್ದವರ ರಾಷ್ಟ್ರದಲ್ಲಿ ತಾನು ಮಾಡಿದ್ದ ಹಾನಿಯನ್ನು ಸಂಪೂರ್ಣವೇಕಾಗಿರುವದು. ನಂತರ ತನ್ನ ಮನೆಗೆ ಹಿಂತಿರುಗಿದರೆ ಅವನ ಕಣ್ಣಿಗೆ ಬೀಳುವವು ಅವಶೇಷಗಳು ಮಾತ್ರ. ಜರ್ಮನರ ಯಂತ್ರಗಾರಗಳು ನೆಲಸಮವಾಗಿವೆ. ಅಲ್ಪಸ್ವಲ್ಪ ಉಳಿದಿದ್ದವನ್ನು ಗೆದ್ದ ರಾಷ್ಟ್ರಗಳು ಹಂಚಿಕೊಳ್ಳುತ್ತಿವೆ. ಊರು ಊರುಗಳೇ ನೆಲಸಮವಾಗಿವೆ.

"ಆದರೂ ಜರ್ಮನರು ಆಶಾವಾದಿಗಳು. ಈ ಎಲ್ಲ ಆಪತ್ತುಗಳಿಂದಲೂ ಧೈರ್ಯಗುಂದದೆ ಕಾರ್ಯಪ್ರವೃತ್ತನಾಗಿರುವರು. ಇಂದಾದರೂ ಮಿತ್ರರಾಷ್ಟ್ರಗಳು ವಿಭಕ್ತ ಜರ್ಮನಿಯನ್ನು ಒಟ್ಟುಗೂಡಿಸಿ ಅವರ ಪಾಡಿಗೆ ಅದನ್ನು ಬಿಟ್ಟುಕೊಟ್ಟರೆ ಇಂದಿಲ್ಲ ನಾಳೆ ಜರ್ಮನಿಯು ಪುನಃ ತಲೆಯೆತ್ತಬಲ್ಲದೆಂದು ಪ್ರತಿಯೊಬ್ಬ ಜರ್ಮನನೂ ನಂಬಿರುವನು. ಎಂದು ತಮ್ಮ ದೇಶ ಒಟ್ಟುಗೂಡಿ ತಮ್ಮ ಆಶಳಿತೆಯಲ್ಲಿ ಬರುತ್ತದೆಯೋ ಎಂದು ಜರ್ಮನರು ಹಾದಿಕಾಯುತ್ತಿರುವರು."




#### ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು

ಬರೆದವರು: ಶ್ರೀ ವಿ. ಕೃ. ಗೋಕಾಕರು. ಪ್ರಕಟಿಸಿದವರು: ಪದ್ಮಾ ಪ್ರಕಟನಾಲಯ, ಹೈದರಾಬಾದ (ದಕ್ಷಿಣ)— ಬೆಲೆ ೨ ರೂಪಾಯಿಗಳು.

ಆರಂಭ ದಶೆಯಲ್ಲಿ ಹೊಸಕನ್ನಡ ಸಾಹಿತ್ಯದ ಬೆಳವಣಿಗೆಗಾಗಿ ಹಿರಿಯರು ಲೆಖಕರಿಗೆ ಬಹುವಿಧವಾಗಿ ಬೆಂಬಲಕೊಟ್ಟರು. ಈಗ ಅದು ಬೆಳೆಯುತ್ತ ಸಾಗಿದೆ. ಉತ್ತಮ ಕೃತಿಗಳೆಷ್ಟೋ ಹೊರಬಿದ್ದಿವೆ. ಆದರೆ ಜೊಳ್ಳುಗಳೇನೂ ಕಡಿಮೆಯಿಲ್ಲ. ಇದಕ್ಕೆ ಕಾರಣವೇನೆಂದರೆ, ನಮ್ಮ ತರುಣ ಲೇಖಕರಲ್ಲಿ ಹಲವರಿಗೆ ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು ಚೆನ್ನಾಗಿ ಅರಿವಾಗದುದೇ. ಇಂತಹ ಸಾಧಕವರ್ಗಕ್ಕೂ ತಮ್ಮ ಅಭಿರುಚಿಯನ್ನು ತಿದ್ದಿ ಬೆಳೆಸಿ ಕೊಳ್ಳಲೆಳ್ಸುವ ರಸಿಕರಿಗೂ ಸಾಹಿತ್ಯಕ್ಕೆ ಸಂಬಂಧಿಸಿದ ಸಂಸ್ಕೃತಿ, ಗದ್ಯಪದ್ಯಗಳ ತಾರತಮ್ಯ, ವ್ಯಕ್ತಿತ್ವ ನಿರೂಪಣೆ ಸ್ಫೂರ್ತಿ ಸಾಧನಗಳು ಇತ್ಯಾದಿ ಸಮಸ್ತ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಿಸಿ ನಿರ್ದಿಷ್ಟಾಭಿಪ್ರಾಯವನ್ನು ಕೊಟ್ಟ ಶ್ರೀ ಗೋಕಾಕರ ಕಾರ್ಯ ಸ್ತುತ್ಯವಾಗಿದೆ. ಗ್ರಂಥಕರ್ತರ ಆಳವಾದ ಅನುಭವ, ಪಾಶ್ಚಾತ್ಯ ಪೌರಸ್ತ್ಯ ವಿಮರ್ಶಾಶಾಸ್ತ್ರಗಳ ಪರಿಜ್ಞಾನ— ಇವುಗಳು ಸುವ್ಯಕ್ತವಾಗಿ ಈ ಗ್ರಂಥದಲ್ಲಿ ಕಾಣಬರುತ್ತವೆ.

ಮಾನವನ ಹೃದಯ ವೈಶಾಲ್ಯ, ಔದಾರ್ಯ, ಸಹಾನುಭೂತಿ—ಇವುಗಳು ಹೇಗೆ ಸಂಸ್ಕೃತಿಯ ಅಡಿಗಲ್ಲಾಗುವುವೆಂಬುದನ್ನು ಸಂಗ್ರಹದ ಮೊದಲ ಪ್ರಬಂಧದಲ್ಲಿ ವಿಶದೀಕರಿಸಲಾಗಿದೆ. "ಮಾನವ ಕುಟುಂಬವೆಲ್ಲ ಒಂದು ಎಂಬ ಭಾವನೆಯಿಂದ ಪ್ರೇರಿತನಾಗಿ ಜಗತ್ತಿನ ಕೂಟಪ್ರಶ್ನೆಗಳನ್ನು ಕುರಿತು ಇಂದಿನವರೆಗೆ ಮಾನವೀಯ ವಿಚಾರಕ್ರಮವು ಎಲ್ಲಿಯವರೆಗೆ ಪ್ರಗತಿಯನ್ನು ಹೊಂದಿದೆಯೆಂಬುದನ್ನು ತಿಳಿಯಲು ಪ್ರಯತ್ನಿಸುತ್ತ ತನ್ನ ಬಗೆಗೆ ತೋಚಿದಂತೆ ಆ ಸಮಸ್ಯೆಗಳನ್ನು ಬಿಡಿಸತೊಡಗಿದವನೆ ಸುಸಂಸ್ಕೃತನು" ಎಂಬ ಶ್ರೀಯುತರ ಮಾತು ಸತ್ಯವೂ ಸಹಜವೂ ಆಗಿದೆ. ಆ ಬಳಿಕ ಕನ್ನಡ ನುಡಿಯಲ್ಲಿರುವ ಸಂಸ್ಕೃತಿಯ ಆಳ ಅಗಲಗಳ ಬಗ್ಗೆ ಅದನ್ನು ಬೆಳೆಕಿಗೆ ತರಲು ಮಾಡಬೇಕಾಗಿರುವ ಕರ್ತವ್ಯವನ್ನೂ ಸ್ಪಷ್ಟಪಡಿಸಲಾಗಿದೆ.

ಮುಂದೆ ಕವಿಯು ನಿರಂಕುಶನೆಂದ ಕೂಡಲೆ ವಿಶೃಂಖಲಪ್ರವೃತ್ತಿಯವನಲ್ಲ; ಕಾವ್ಯಶಾಸ್ತ್ರದ ನಿಯಮಗಳಿಂದ ಬದ್ಧನೆಂದ ಕೂಡಲೆ ಗುಲಾಮನಲ್ಲ ಎಂಬುದನ್ನು ವಿಶದವಾಗಿ ಹೇಳಲಾಗಿದೆ. ಸ್ಫೂರ್ತಿಪ ಭಾವದ ವಿಷಯದಲ್ಲಿ ಅಧುನಿಕ ಕವಿಗಳಿಗೆ ಯೋಗ್ಯವಾದ ಮುಂಜಾಗ್ರತೆಯನ್ನು ಕೊಡಲಾಗಿದೆ. ಅವರು ಮಾಡುವ ವ್ಯಾಕರಣಾದಿ ದೋಷಗಳು ತ್ಯಾಜ್ಯವೆಂದು ನಿರ್ದೇಶಿಸಲಾಗಿದೆ.

ಗದ್ಯ ಪದ್ಯ ಭೇದವನ್ನು ಪ್ರಸಿದ್ಧ ವಿಮರ್ಶಕರ ಅಭಿಪ್ರಾಯ, ಚರ್ಚೆ, ಉದಾಹರಣೆ—ಇವುಗಳೊಡನೆ, ವಿಸ್ತಾರವಾಗಿ ವಿಶದೀಕರಿಸಲಾಗಿದೆ. ಇಂದಿನ ಬರಹಗಾರರು ಈ ಭಾಗವನ್ನು ವಿಶೇಷವಾಗಿ ಓದತಕ್ಕದ್ದು ಅತ್ಯಗತ್ಯವಾಗಿದೆ. ಪದ್ಯಗಳನ್ನು ಯಾವಾಗ ಬಳಸಬೇಕೆಂಬುದನ್ನು ಇಲ್ಲಿ ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ.

'ಸರಳರಗಳೆ' ಮತ್ತು 'ಸ್ವಚ್ಛಂದ ಛಂದ' ವೆಂಬ ಹೊಸ ಛಂದೋವಿಧಾನಗಳ ಬಗ್ಗೆ ವಿಶೇಷವಾಗಿ ಬರೆಯಲಾಗಿದೆ. ಇದೂ ಕಾವ್ಯಪ್ರಯೋಗ ಪರಿಣತಿ ಪಡೆಯಲಿಚ್ಛಿಸುವವರಿಗೆ ಅತ್ಯಗತ್ಯವಾದುದು.

ಅಮೇಲೆ 'ಶ್ರೀ'ಯವರ ಮಹಾವ್ಯಕ್ತಿತ್ವಕ್ಕೆ ಗೌರವಸಲ್ಲಿಸಿ ಬೇಂದ್ರೆಯವರ ಕಾವ್ಯದಲ್ಲಿ ಪ್ರೀತಿಯ ರೂಪರೇಷೆಗಳೆಂತೆಂಬುದನ್ನು ಸೋದಾಹರಣವಾಗಿ ಸಮಗ್ರವಾಗಿ ನಿರೂಪಿಸಲಾಗಿದೆ. 'ಕಳರು' 'ಕೊಳಲು'ಗಳ ವಿಮರ್ಶೆ ಕೂಡ ಬಹಳ ವಿಚಾರಪೂರಿತೆಯುಳ್ಳದ್ದಾಗಿದೆ. ಪುಟ್ಟಪ್ಪನವರ ಎಲ್ಲ ಕೃತಿಗಳನ್ನು ತೆಗೆದುಕೊಳ್ಳದಿದ್ದರೂ ತೆಗೆದುಕೊಂಡಷ್ಟೇ ಕೃತಿಗಳಿಂದ ಅವರ ಕೃತಿಗಳಲ್ಲಿ ಕಂಡುಬರುವ ಉತ್ತಮ ಗುಣ ಮತ್ತು ಕೆಲವು ದೋಷಗಳ ಪರಿಚಯ ಚೆನ್ನಾಗಿ ಆಗಬಹುದಾಗಿದೆ.

ಇಂದಿನ ರಸಿಕರಿಗೆ ಲೇಖಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಈ ವಿಮರ್ಶಾಗ್ರಂಥವು ಅತ್ಯಂತ ಉಪಕಾರಿಯಾಗಿದೆ. ಕಾವ್ಯಾಭ್ಯಾಸಿಗಳಿಗಂತೂ ಇದೊಂದು ಕೈದೀವಿಗೆಯೇ ಸರಿ. ಇಂತಹ ಉತ್ತಮ ಗ್ರಂಥವನ್ನು ಬರೆದ ಶ್ರೀ ಗೋಕಾಕರು ಮತ್ತು ಅದನ್ನು ಪ್ರಕಟಿಸಿದ ಪದ್ಮಾ ಪ್ರಕಟನಾಲಯದವರು ಹಾರ್ದಿಕ ಅಭಿನಂದನೆಗೆ ಪಾತ್ರರು. ಕೊನೆಯದಾಗಿ ಆಯಾ ಪ್ರಬಂಧಗಳ ಕಾಲವನ್ನು ನಿರ್ದೇಶಿಸಿದ್ದರೆ ಗ್ರಂಥಕರ್ತರ ಅಭಿಪ್ರಾಯದ ಸ್ಥಿತ್ಯಂತರಗಳನ್ನು ಅರಿತುಕೊಳ್ಳಲು ಅನುಕೂಲವಾಗುತ್ತಿತ್ತೆಂಬುದನ್ನು ಹೇಳದಿರಲಾರೆವು.

#### ಹಾಡು—ಪಾಡು

ಬರೆದವರು: ಅಂಬಿಕಾ ತನಯದತ್ತರು, ಪ್ರಕಾಶಕರು ಅನಂದ ಸಾಹಿತ್ಯಮಂದಿರ, ಗಲಗಲಿ; ಬೆಲೆ ಒಂದು ರೂಪಾಯಿ; ಪುಟಗಳು ೫೦.

ಅಂಬಿಕಾತನಯದತ್ತರು ಕನ್ನಡನಾಡಿಗೆ ಅಪರಿಚಿತರಲ್ಲ. ಜೀವನದ ಸಮುದ್ರದಿಂದೆದ್ದ ಅವರ ಭಾವತರಂಗಗಳ ನಾದಲೀಲೆಯಲ್ಲಿ ಲೀನನಾಗದ ರಸಿಕನಿಲ್ಲ. ಪ್ರಸ್ತುತ ಕವನಸಂಗ್ರಹದಲ್ಲಿ 'ದವನ ಹುಣ್ಣಿವೆಯ ಚಾಕ್ರಿಯ ರಾತ್ರಿ'

—ಕೆಳ ಪುಟಕ್ಕೆ

## ಗೃಹಮಂತ್ರಿಗಳ ಸಂಚಾರ

ಮುಂಬಯಿ ಸರಕಾರದ ಗೃಹಮಂತ್ರಿಗಳಾದ ಮಾನ್ಯ ಶ್ರೀ ಮುರಾರಜಿಯವರು ಧಾರವಾಡ ಜಿಲ್ಲೆಯ ಹಾಗು ಉತ್ತರ ಕನ್ನಡ ಜಿಲ್ಲೆಯ ಸಂಚಾರವನ್ನು ಮುಗಿಸಿಕೊಂಡು ಮರಳಿ ಹೋದರು. ಗೃಹಮಂತ್ರಿಗಳು ತಮ್ಮ ಸಂಚಾರದಲ್ಲಿ ಕರ್ನಾಟಕಸ್ಥರಿಗೆಲ್ಲ ಕೆಲವು ಹಿತೋಪದೇಶದ ನುಡಿಗಳನ್ನು ಹೇಳಿದ್ದುದು ವಾಚಕರ ಲಕ್ಷ್ಯದಲ್ಲಿರಬಹುದು. ಮಾನ್ಯ ಶ್ರೀ ಮುರಾರಜಿಯವರು ಕಡುಖಂಡಿತವಾದಿಗಳೆಂದು ಹೆಸರು ಪಡೆದಿರುವದರಿಂದ ಅವರ ಮಾತುಗಳ ವಿಷಯದಲ್ಲಿ ಕರ್ನಾಟಕದ ಜನರು ಒಂದು ಬಗೆಯಿಂದ ಅತ್ಯಂತ ಆತುರತೆಯನ್ನಿಟ್ಟುಕೊಂಡಿದ್ದುದು ಅನುಚಿತವಲ್ಲ. ಕನ್ನಡಿಗರ ನಿರೀಕ್ಷಣೆಗೆ ತಕ್ಕಂತೆ ಶ್ರೀ ಮುರಾರಜಿಯವರಾದರೂ ಬಿಚ್ಚುಬಗೆಯಿಂದ ಕಾಂಗ್ರೆಸ ಕೆಲಸಗಾರರ ಕೂಡ ಹಾಗೂ ನಾಗರಿಕರ ಕೂಡ ಹಲವಾರು ವಿಷಯಗಳ ವಿಚಾರವಿನಿಮಯ ಮಾಡಿದರು. ಗೃಹ ಮಂತ್ರಿಗಳು ಅನುಸರಿಸಿದ ಈ ಮಾರ್ಗವು ಸಾರ್ವಜನಿಕ ಜೀವನದ ಪರಿಶುದ್ಧತೆಯ ದೃಷ್ಟಿಯಿಂದ ಯೋಗ್ಯವೇ ಸರಿ. ಆದರೆ ಮಂತ್ರಿಗಳು ಕಾಂಗ್ರೆಸ ಕಾರ್ಯಕರ್ತರ ಕೂಡ ಆಪ್ತಾಲೋಚನೆ ಮಾಡುವಾಗ ಸಂಚಾರದ ವ್ಯವಸ್ಥಾಪಕರು ಇನ್ನಷ್ಟು ಸುವ್ಯವಸ್ಥಿತವಾದ ರೀತಿಯಲ್ಲಿ ಇಂತಹ ವಿಚಾರವಿನಿಮಯಗಳು ನಡೆವಂತೆ ನೋಡಿಕೊಳ್ಳುವದವಶ್ಯವೆಂದು ತೋರುತ್ತದೆ. ಹೀಗೆ ಮಾಡಿದರೆ ಅಲ್ಪ ಸಮಯದಲ್ಲಿ ಹೆಚ್ಚು ಜನರಿಗೆ ನಿರ್ವಿಕಾರ ಮನದಿಂದ ಅವರವರ ವಿಚಾರಗಳನ್ನು ಮಂಡಿಸಲು ಅವಕಾಶ ದೊರೆಯುವದು. ವಿಚಾರವಿನಿಮಯಕ್ಕೆ ಬಂದ ಮಂತ್ರಿಗಳಾದರೂ ತಾಳ್ಮೆಯಿಂದ ಕೆಲಸಗಾರರ ವಿವಿಧ ಅಡಚಣಿಗಳನ್ನು ಕೇಳಿಕೊಂಡು ಅವುಗಳಿಗೆ ಪರಿಹಾರವನ್ನು ಸೂಚಿಸಬೇಕಲ್ಲದೆ ಜನತೆಯ ಆರೋಪಗಳಲ್ಲಿಯ ಹೇತ್ವಾಭಾಸಗಳನ್ನು ಎತ್ತಿತೋರಿಸಿ ಅವುಗಳಿಗೆ ಉತ್ತರವನ್ನು ಕೊಟ್ಟಂತಾಯ್ತೆಂದು ಸಮಾಧಾನ ಹಚ್ಚಿಕೊಳ್ಳಬಾರದೆಂದು ನಮ್ಮ ಅಭಿಪ್ರಾಯ. ಇಲ್ಲದೆ ಕೆಲಸಗಾರರು ಏನಾದರೊಂದು ಪ್ರಶ್ನೆಯನ್ನು ಕೇಳಿದ ಕೂಡಲೆ ಅದು ದುರಾರೋಪವೆಂಬ ಭಾವನೆಯನ್ನು ಮನಸಿನಲ್ಲಿ ತರದೆ ಶಾಂತಚಿತ್ತದಿಂದ ಅದಕ್ಕೆ ಉತ್ತರವನ್ನು ಕೊಡಬೇಕು. ಕೆಲಸಗಾರರಾದರೂ ಮಂತ್ರಿಗಳ ಕೂಡ ವಿಚಾರವಿನಿಮಯ ಮಾಡಿ ತಮ್ಮ ಸಂಶಯಗಳನ್ನು ನಿವಾರಿಸಿಕೊಳ್ಳುವ ಆತುರತೆಯಲ್ಲಿ ಸೌಜನ್ಯದ ರೀತಿ ನೀತಿಗಳನ್ನು ಮರೆಯಕೂಡದು, ಮತ್ತು ಒಮ್ಮೆಲೆ ಪ್ರಾಂತೀಯ ಇಲ್ಲವೆ ಜಾತೀಯ ಆರೋಪವನ್ನು ಮಾಡಿ ವಿಕಾರಯುಕ್ತ ಮನೋಭಾವವನ್ನು ಪ್ರದರ್ಶಿಸಬಾರದು. ಗೃಹ ಮಂತ್ರಿಗಳು ಬಂದಕಾಲಕ್ಕೆ ಈ ಬಗೆಯ ಪ್ರದರ್ಶನವಾದುದರಿಂದಲೇ ನಾವು ಈ ಮಾತನ್ನು ಒತ್ತಿ ಹೇಳಬೇಕಾಗಿದೆ. ಕರ್ನಾಟಕವನ್ನು ಮುಂಬಯಿ ಸರಕಾರವು ಅಲಕ್ಷಿಸಿದೆಂಬ ಆರೋಪವು ನಿರಾಧಾರವಾದುದೆಂದೂ ತಮ್ಮಲ್ಲಿ ಮನೆಮಾಡಿಕೊಂಡಿರುವ ಕೀಳು ಭಾವನೆಯನ್ನು ತೆಗೆದು ಹಾಕಬೇಕೆಂದೂ ಕರ್ನಾಟಕದವರಿಗೆ ಶ್ರೀ ಮುರಾರಜಿಯವರು ಉಪದೇಶಿಸಿದರು. ಸ್ವಯಂಹೀನತೆಯ ಮನೋವೃತ್ತಿಯು ಯೋಗ್ಯವಲ್ಲೆಂಬ ವಿಷಯದಲ್ಲಿ ಮತಭೇದವೇ ಇಲ್ಲ. ಕರ್ನಾಟಕದ ಜನತೆಯೂ ಪ್ರತಿನಿಧಿಗಳೂ ಒಕ್ಕಟ್ಟಿನಿಂದ ಸ್ವಕರ್ತೃತ್ವದಲ್ಲಿ ಶ್ರದ್ಧೆಯನ್ನಿಟ್ಟುಕೊಂಡು ಮುನ್ನಡೆಯಬೇಕೆಂಬ ಮಾತನ್ನು ನಾವು ಹಿಂದೊಮ್ಮೆ ಕರ್ನಾಟಕದ ಶಿಷ್ಟಮಂಡಲವು ಮುಖ್ಯಮಂತ್ರಿ ಖೇರರನ್ನು ಕಾಣಲು ಹೋದ ಕಾಲಕ್ಕೆ ಸ್ಪಷ್ಟವಾಗಿ ಹೇಳಿದ್ದೇವೆ. ಮನೆಯಲ್ಲಿ ಕಾಮಧೇನು ಇರುವಾಗ ದೊಡ್ಡಾಕಳ ಬೆನ್ನತ್ತುವದು ಸರಿಯಲ್ಲೆಂಬುದನ್ನು ಕರ್ನಾಟಕ ಜನತೆಯೂ ಪ್ರತಿನಿಧಿಗಳೂ ತಿಳಿದುಕೊಳ್ಳಬೇಕು. ಇದೇ ಅಭಿಪ್ರಾಯವನ್ನೇ ಮುರಾರಜಿಯವರು ವ್ಯಕ್ತಪಡಿಸಿದ್ದುದು ಗಮನಾರ್ಹವಾಗಿದೆ. ಶಾಸನ ಸಭೆಗಳಲ್ಲಿಯ ನಮ್ಮ ಪ್ರತಿನಿಧಿಗಳು ಹಾಗೂ ಕಾಂಗ್ರೆಸ ಕೆಲಸಗಾರರು ತಮ್ಮ ತಮ್ಮೊಳಗಿನ ಭೇದಭಾವಗಳನ್ನು ಬದಿಗಿರಿಸಿ ವಿಶಾಲದೃಷ್ಟಿಯಿಂದ ಎಲ್ಲ ಸಮಸ್ಯೆಗಳನ್ನು ನೋಡತೊಡಗಿದರೆ ನಮ್ಮ ಪ್ರಾಂತದ ವರ್ಚಸ್ಸು ಹಾಗು ಶಕ್ತಿ ಬೆಳೆದು ಮುಂಬಯಿ ಸರಕಾರವನ್ನಷ್ಟೇ ಏಕೆ ಹಿಂದುಸ್ತಾನ ಸರಕಾರವನ್ನು ಕೂಡ ಮಣಿಸಬಹುದು. ಶ್ರೀ ಮುರಾರಜಿಯವರು ಮಾಡಿದ ಇನ್ನೊಂದು ಉಪದೇಶವು ಕೂಡ ಒಳ್ಳೇ ಮನನೀಯವಾಗಿದೆ. ಕಾಂಗ್ರೆಸ ಕೆಲಸಗಾರರು ಸಮಾಜವನ್ನೇ ಉದ್ಧರಿಸುವ ಉದಾತ್ತ ಕಾರ್ಯಕ್ಕಾಗಿ ಪ್ರಯತ್ನಿಸಬೇಕು; ತಾವು ಗುಣಪರಿಪೂರ್ಣರು ಉಳಿದವರು ದೋಷಿಗಳೆಂಬ ಭಾವನೆಯನ್ನು ತಳೆಯಬಾರದು. ಆತ್ಮ ನಿರೀಕ್ಷಣೆಮಾಡಿಕೊಳ್ಳಬೇಕೆಂದು ಹೇಳಿದ ಅವರ ಹಿತೋಕ್ತಿಯ ಬಗೆಗೆ ಯಾರೂ ಆಕ್ಷೇಪವನ್ನೆತ್ತಲಾರರು. ಆದರೆ ಈ ಬಗೆಯ ಆತ್ಮನಿರೀಕ್ಷಣೆಗೆ ಎಷ್ಟು ಜನ ಕೆಲಸಗಾರರು ಸಿದ್ಧರಿರುವರೆಂಬುದೇ ಇಂದಿನ ಪ್ರಶ್ನೆ. ದೇಶದ ದುರ್ದೈವದಿಂದ ಕೆಲಸಗಾರರ ಮನೋರಂಗದಲ್ಲಿ ಸೇವಾಬುದ್ಧಿಗಿಂತಲೂ ಅಧಿಕಾರ ಲೋಲುಪತೆಯು ಹೆಚ್ಚಾಗಿ ನೆಲೆಸಿದೆ. ಅದುದರಿಂದಲೇ ಕಾಂಗ್ರೆಸ ಮಂತ್ರಿಮಂಡಲಗಳ ಕಾರ್ಯವು ಬಯಸಿದಷ್ಟು ಚೆನ್ನಾಗಿ ಸಾಗುತ್ತಿರುವದಿಲ್ಲ. ಗೃಹಮಂತ್ರಿಗಳ ಸಂಚಾರದಿಂದ ಕೆಲಸಗಾರರ ಮನಃಪಲ್ಲಟವೇನಾದರೂ ಆದರೆ ಮಾತ್ರ ಅವರ ಸಂಚಾರವು ಸಫಲವಾಗುವದು. ಗೃಹಮಂತ್ರಿಗಳಾದರೂ ತಮ್ಮ ಸಂಚಾರದಲ್ಲಿ ಅನುಭವಕ್ಕೆ ಬಂದ ಮಾತುಗಳನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೊಂಡು ಕರ್ನಾಟಕದ ಜನತೆಯ ಆಶೋತ್ತರಗಳ ಸಿದ್ಧಿಯು ಬೇಗ ಆಗುವಂತೆ ಶಕ್ತಿಮೀರಿ ಪ್ರಯತ್ನಿಸಬೇಕು. ಕನ್ನಡಿಗರು ಒಣ ಉಪದೇಶದ ಮಾತುಗಳನ್ನು ಬಹುದಿನಗಳಿಂದ ಕೇಳಿಕೇಳಿ ಬೇಸತ್ತಿರುವದರಿಂದ ತುಸು ಮಟ್ಟಿಗೆ ಈಗಿನ ಮಂತ್ರಿಮಂಡಲದ ವಿಷಯದಲ್ಲಿಯೂ ಕನಲಿರುವ ಸಂಭವವಿದೆ. ಆದರೆ ಅದರ ಇಂಗಿತವು ಕೇವಲ ದೋಷಾರೋಪಣೆಯೆಂದಿರದೆ ತೀವ್ರಗತಿಯ ಮುನ್ನಡೆಯೆಂಬ ಭಾವನೆಯ ಔದಾರ್ಯವನ್ನು ಗೃಹಮಂತ್ರಿಗಳೂ ಅವರ ಸಹಕಾರಿಗಳೂ ತಳೆಯಬೇಕು. ಮತ್ತು ದ್ರುತಗತಿಯಿಂದ ಕರ್ನಾಟಕದ ಆಸೆ—ಆಕಾಂಕ್ಷೆಗಳು ಕೈಗೂಡುವಂತೆ ಎಲ್ಲ ಬಗೆಯಿಂದಲೂ ನೆರವಾಗಬೇಕು. ಕರ್ನಾಟಕಸ್ಥರು ಮಂತ್ರಿಮಂಡಲದ ಮೇಲೆ ಹೊರಿಸುವ ಆರೋಪಕ್ಕೆ ಸಮರ್ಪಕ ಉತ್ತರವನ್ನು ಕೊಡುವ ಮಾರ್ಗವೇ ಇದು. ಇದನ್ನು ಬಿಟ್ಟು ಎಷ್ಟು ಪರಿಯಿಂದ ಮಂತ್ರಿಮಂಡಲವು ಉಪದೇಶವನ್ನು ಮಾಡಿದರೂ ಜನತೆಯಲ್ಲಿಯ ತಪ್ಪುತಿಳಿವಳಿಕೆಯನ್ನು ನಿವಾರಿಸುವದು ಕೆಲಸಗಾರರಿಗೆ ಬಹಳ ಬಿಗಿಯಾಗುವದು. ಆದುದರಿಂದ ಕರ್ನಾಟಕದ ಬೇಡಿಕೆಗಳ ಪರಿಶೀಲನೆಯು ಬೇಗ ನಡೆದು ಪ್ರತ್ಯಕ್ಷ ಕಾರ್ಯವನ್ನು ಈಗಿನ ಮಂತ್ರಿಮಂಡಲವು ತೀವ್ರ ಕೈಕೊಳ್ಳಬೇಕೆಂದು ಸೂಚಿಸುತ್ತೇವೆ.

## ಸಂಪಾದಕೀಯ ಟೀಕೆಟಿಪ್ಪಣಿಗಳು

## ರಾಷ್ಟ್ರೀಯ ಮಜದೂರ ಕಾಂಗ್ರೆಸು

ರಾಷ್ಟ್ರೀಯ ಮಜದೂರ ಕಾಂಗ್ರೆಸು ಸ್ಥಾಪಿತವಾದ ಸುದ್ದಿಯು ವಾಚಕರಿಗೆ ಗೊತ್ತಿದೆ. ಈಗ ಈ ಸಂಸ್ಥೆಯ ಕರ್ನಾಟಕ ಶಾಖೆಯೊಂದು ಮೊನ್ನೆ ೨೦ನೇ ದಿನಾಂಕದಲ್ಲಿ ಹುಬ್ಬಳ್ಳಿಯಲ್ಲಿ ಸೇರಿದ್ದ ಕೂಲಿಕಾರ ಕೆಲಸಗಾರರ ಸಭೆಯಲ್ಲಿ ಸ್ಥಾಪಿಸಲ್ಪಟ್ಟಿತು. ಈ ಸಂಸ್ಥೆಗೆ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಅಧ್ಯಕ್ಷರಾಗಿರುವ ಶ್ರೀ ನಿಜಲಿಂಗಪ್ಪನವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟಿರುವರು. ಶ್ರೀ ದುಂದೂರರು ಕಾರ್ಯದರ್ಶಿಗಳಾಗಿರುವರು. ಅದಕ್ಕಾಗಿ ಅವರಿಬ್ಬರನ್ನೂ ನಾವು ಅಭಿನಂದಿಸುತ್ತೇವೆ. ಆದರೆ ಅವರ ಮೇಲೆ ಹೆಚ್ಚಿನ ಹೊಣೆಯು ಬಿದ್ದಿದೆಂಬುದನ್ನು ಕನ್ನಡಿಗರಾರೂ ಮರೆಯಬಾರದು. ಅವರ ಕೆಲಸದಲ್ಲಿ ಕರ್ನಾಟಕದ ಕೂಲಿಕಾರರೂ ಕೆಲಸಗಾರರೂ ನೆರವಾಗಿ ಈ ಸಂಸ್ಥೆಯು ಯಶಸ್ವಿಯಾಗುವಂತೆ ಸಾಗಬೇಕೆಂದು ಹೇಳಲಿಚ್ಛಿಸುತ್ತೇವೆ.

ಹೊಸದಾಗಿ ಸ್ಥಾಪಿತವಾದ ಈ ಸಂಸ್ಥೆಯ ಗೊತ್ತುಗುರಿಗಳ ಹಾಗೂ ಕಾರ್ಯಪದ್ಧತಿಯ ವೈಶಿಷ್ಟ್ಯವನ್ನು ಕುರಿತು ಒಂದೆರಡು ಮಾತುಗಳನ್ನು ಇಲ್ಲಿ ಹೇಳದಿರಲಾರೆವು. ಬ್ರಿಟಿಶರ ಕಡೆಯಿಂದ ಅಧಿಕಾರವನ್ನು ಕಸಿದುಕೊಳ್ಳುವ ಕೆಲಸವಂತು ಮುಗಿಯಬಂದಿದೆ. ಹಿಂದುಸ್ತಾನವು ಸ್ವತಂತ್ರದೇಶವಾದಂತೆಯೇ ಎಂದು ಈಗ ತಿಳಿದುಕೊಂಡು ನಮ್ಮ ಸಮಸ್ಯೆಗಳ ವಿಚಾರವನ್ನು ಮಾಡಲಾವ ಅಡ್ಡಿಯೂ ಇಲ್ಲ. ಬಡತನ, ಆರ್ಥಿಕ ವಿಷಮತೆ ಮೊದಲಾದ ಇವುಗಳನ್ನು ಹೋಗಲಾಡಿಸಿ ನಮ್ಮ ರಾಷ್ಟ್ರವು ಸುಸಂಪನ್ನ ರಾಷ್ಟ್ರವಾಗುವಂತೆ ಮಾಡುವದು ಇದೀಗ ನಮ್ಮ ಮುಂದಿರುವ ಪ್ರಶ್ನೆ. ಇದಾಗಬೇಕಾದರೆ ವರ್ಗ ಕಲಹದ ಮೂಲಕ ಉಂಟಾಗುವ ಅನರ್ಥಗಳನ್ನೂ ಅಶಾಂತಿಯನ್ನೂ ತಪ್ಪಿಸುವದವಶ್ಯ. ಇಲ್ಲದಿದ್ದರೆ ರಾಜಕೀಯ ಸ್ವಾತಂತ್ರ್ಯವು ನಮಗೆ ದೊರೆತರೂ ಆರ್ಥಿಕ ದೃಷ್ಟಿಯಿಂದ ಅದು ಪೂರ್ಣ ಪರತಂತ್ರವಾಗಿ ಉಳಿಯಬಹುದು. ಈ ಗಂಡಾಂತರವನ್ನು ತಪ್ಪಿಸಬೇಕಾದರೆ ಕೂಲಿಕಾರರೂ ಒಡೆಯರೂ ಐಮತ್ಯದಿಂದ ಸಹಕರಿಸಿ ಅನ್ನವಸ್ತ್ರಾದಿಗಳ ಉತ್ಪತ್ತಿಯನ್ನು ಬೆಳೆಸುವದಗತ್ಯ ನಮ್ಮ ಸುದೈವದಿಂದ ಇಂಗ್ಲಂಡವು ಈಗ ನಮಗೆ ಸಾಲಗಾರ ರಾಷ್ಟ್ರವಾಗಿದೆ. ಈ ಸಂಧಿಯ ಲಾಭ ಪಡೆದುಕೊಂಡು ನಮ್ಮ ಉದ್ಯೋಗ ವ್ಯವಸಾಯಗಳನ್ನು ನಾವು ಬೆಳೆಸಿಕೊಂಡರೆ ಮಾತ್ರ ನಾವು ಬದುಕಿರಬಲ್ಲೆವು. ಇದೆಲ್ಲ ಆಗಬೇಕಾದರೆ ಕೂಲಿಕಾರರ ಸ್ಥಿತಿ ಸುಧಾರಿಸಲಿಕ್ಕೆಬೇಕು. ಅವರು ಕಾರ್ಯಕ್ಷಮರಾಗಬೇಕು; ಅವರ ಸಾಮಾಜಿಕ ಹಾಗೂ ಆರ್ಥಿಕ ಉನ್ನತಿಯಾಗಬೇಕು. ಈ ಗುರಿಯನ್ನು ಸಾಧಿಸಲು ವಿವಿಧ ಮಾರ್ಗಗಳಿವೆ. ಆದರೆ ನಮ್ಮ ರಾಷ್ಟ್ರದ ಇಂದಿನ ಪರಿಸ್ಥಿತಿಯಲ್ಲಿ ಹಿಂಸಾಚಾರ, ಸಂಪು ಮೊದಲಾದ ಸಾಧನಗಳಿಂದ ಈ ಗುರಿಯನ್ನು ಸಾಧಿಸುವದನುಚಿತ. ಕೂಲಿಕಾರರು ಕೇವಲ ಕೂಲಿಕಾರ ಹಿತವನ್ನಷ್ಟೇ ನೋಡದೆ ರಾಷ್ಟ್ರದ ಹಿತವನ್ನು ಗಮನಿಸಬೇಕು. ಅದರಂತೆ ಬಂಡವಲದಾರರೂ ಬರೀ ಬಂಡವಲದ ಬೆಳವಣಿಗೆಯನ್ನಷ್ಟೇ ನೋಡದೆ ನಾಡಿನ ಏಳಿಗೆಗೂ ಗಮನವೀಯಬೇಕು. ಹೀಗೆ ಇತ್ತಂಡವನ್ನೂ ಸಮನ್ವಯ ಮಾರ್ಗಕ್ಕೆ ತರುವದು ಈಗ ಬಹಳ ಅವಶ್ಯವಾಗಿದೆ. ಅದುದರಿಂದ ರಾಷ್ಟ್ರೀಯ ಮಜೂರ ಕಾಂಗ್ರೆಸು ಜನ್ಮತಾಳಿದೆ. ಈ ಸಂಸ್ಥೆಗೆ ಆಕ್ಷೇಪ ಎತ್ತುವವರು ಈ ಸಂಸ್ಥೆಯು ಸಂಪಿಗೆ ವಿರುದ್ಧವಿದೆಂದು ಹೇಳುವರು. ಸಂಪು ಕೊನೆಯ ಶಸ್ತ್ರ. ಎಲ್ಲ ಉಪಾಯಗಳು ತೀರಿದ ಬಳಿಕ ಅದನ್ನು ಒರೆಯಿಂದ ಹಿರಿಯಬಹುದೆಂದು ಈ ಸಂಸ್ಥೆ ನಂಬಿದೆ. ಹೀಗೆ ನಂಬುವದೇನೂ ಅಪರಾಧವಲ್ಲ. ರಾಷ್ಟ್ರದ ಹಿತ ಹಾಗೂ ಕೂಲಿಕಾರರ ಹಿತ—ಇವೆರಡನ್ನೂ ಮನದಲ್ಲಿಟ್ಟುಕೊಂಡು ಹೊರಟ ಈ ಸಂಸ್ಥೆಗೆ ಹಾಗೂ ಅದರ ಕರ್ನಾಟಕ ಶಾಖೆಗೆ ಕೂಲಿಕಾರರು ನಿಃಸಂಕೋಚವಾಗಿ ಬೆಂಬಲವಿತ್ತು ಅದರಿಂದ ತಮ್ಮ ಕಲ್ಯಾಣವನ್ನು ಮಾಡಿಕೊಳ್ಳಬೇಕೆಂದು ಹೇಳುತ್ತೇವೆ.

## ಭಟಕಳ ಬಂದರ

ಅಚ್ಚ ಕನ್ನಡಿಗರಾದ ಶ್ರೀ ಎ. ಎಂ. ಭಟ್ಟರಿಗೆ ಭಟಕಳದ ಹತ್ತಿರದ ಸಮುದ್ರ ಪರಿಶೀಲನೆ ಮಾಡಲು ಸರಕಾರದವರು ಅನುಜ್ಞೆ ಕೊಟ್ಟಿರುವರು. ಶ್ರೀ ಭಟ್ಟರು ಈ ಕಾರಣದಿಂದ ಅಭಿನಂದನೀಯರು. ಅವರ ದೀರ್ಘೋದ್ಯೋಗ ಸತತ ಪ್ರಯತ್ನಗಳ ಫಲವೇ ಇದು. ಭಟಕಳ ಬಂದರವು ಪ್ರತ್ಯಕ್ಷ ಅಸ್ತಿತ್ವದಲ್ಲಿ ಬರಲು ಕಾಲ ವಿಲಂಬವಾಗಬಹುದು. ಆದರೆ ಅಂತಹ ಬಂದರವಾಗಲು ಇದೊಂದು ಮೊದಲ ಹೆಜ್ಜೆಯೆಂದು ಹೇಳಲಡ್ಡಿಯಿಲ್ಲ. ಶ್ರೀ ಭಟ್ಟರು ಅಲ್ಲಿ ಒಂದು ಹಡಗವನ್ನು ಕಟ್ಟುವ ಕಾರಖಾನೆಯನ್ನು ಪ್ರಾರಂಭಿಸಬೇಕೆಂದಿರುವರು. ಇದಾದರೂ ಒಳ್ಳೇ ಮಹತ್ವದ ಹಾಗೂ ಸ್ತುತ್ಯ ಉದ್ಯೋಗವೆಂಬಲ್ಲಿ ಸಂಶಯವಿಲ್ಲ. ಶ್ರೀ ಭಟ್ಟರು ಕೈಕೊಂಡ ಈ ಕಾರ್ಯಕ್ಕೆ ಎಲ್ಲ ಕನ್ನಡಿಗರು ಆಸ್ಥೆಯಿಂದ ನೆರವನ್ನು ನೀಡುವರೆಂದು ಹಾರೈಸುತ್ತೇವೆ.

## ಹೈದರಾಬಾದ ಹೊರಟಿರುವದೆತ್ತ ?

ತನ್ನ ಪ್ರತಿಗಾಮೀ ಧೋರಣದಿಂದ ಹೆಸರಾದ ಹೈದರಾಬಾದ ಸಂಸ್ಥಾನವು ಇಂದು ಎತ್ತ ಕಡೆಗೆ ಹೊರಟಿರುವದೆಂಬುದನ್ನು ನೋಡಲು ಹಿಂದೀಯರೆಲ್ಲರೂ ಉತ್ಸುಕರಾಗಿರುವರು. ಹೈದರಾಬಾದವು ಘಟನಾ ಸಮಿತಿಯಲ್ಲಿ ಸೇರುವದೋ ? ಅಥವಾ ಇಲ್ಲವೋ ಎಂಬುದನ್ನು ಕುತೂಹಲದಿಂದ ಅನೇಕರು ನಿರೀಕ್ಷಿಸುತ್ತಿರುವದೇ ಅದಕ್ಕೊಂದು ಮಹತ್ವವನ್ನು ತಂದುಕೊಟ್ಟಿದೆ. 'ಪ್ರಗತಿಪರ'ರೆಂದು ಹೆಸರು ಪಡೆದ ಸರ್ ಮಿರ್ಜಾ ಇಸ್ಮಾಯಿಲ್ಲರ ಆಳಿಕೆಯಲ್ಲಿ ಅದು ಸರಿಯಾದ ಮಾರ್ಗವನ್ನು ಹಿಡಿಯುವದೆಂದು ಆಸೆಯಿದ್ದಿತು. ಆದರೆ ನಮ್ಮ ಆಸೆಯೆಲ್ಲ ಬಯಲಾಟಿಯಾಗುವ ಪ್ರಸಂಗ ಬಂದಿದೆ. ಯಾಕೆಂದರೆ ಘಟನಾಸಮಿತಿಯ ಪ್ರವೇಶದ ಹಾಗೂ ಹಿಂದೀ ಒಕ್ಕೂಟ ಸೇರುವ ವಿಷಯದಲ್ಲಿ ನಿಜಾಮ ದೊರೆಗಳ ಕೂಡ ಸರ್ ಮಿರ್ಜಾರವರ ಮತಭೇದವಾಗಿದೆಯಾದ್ದರಿಂದ ಅವರು ಈಗಾಗಲೇ ತಮ್ಮ ಸ್ಥಳವನ್ನು ಬಿಟ್ಟುಕೊಟ್ಟು ಬೆಂಗಳೂರಿಗೆ ಹೋದವರು ತಿರುಗಿ ಬರುವದಿಲ್ಲೆಂದು ತಿಳಿದು ಬಂದಿದೆ. ಪ್ರಗತಿಪರರು ಸರ್ ಮಿರ್ಜಾರವರ ಮನವೊಲಿಸಲು ಯತ್ನ ನಡೆಸಿರುವಾಗಲೇ ಹೈದರಾಬಾದಿನ ಕೆಲ ಪ್ರತಿಗಾಮಿಗಳು ಅವರನ್ನು ಕಿತ್ತಿ ಹಾಕಬೇಕೆಂದು ಬಹಿರಂಗವಾಗಿ ಪ್ರಚಾರ ನಡೆಸಿರುವರು. ಈ ಗಡಿಬಿಡಿಯಲ್ಲಿ ನಿಶ್ಯಕ್ತಿಯಿಂದ ನಿಜಾಮ ಸಾಹೇಬರ ಘಟನಾ ಸಲಹೆಗಾರರಾದ ಸರ್ ವಾಲ್ಟರ ಮಾಂಕ್ಟನ್ನರು ಬಿಲ್ಲಿಗೆ ಧಾವಿಸಿರುವರು. ಈ ರಾಜಕೀಯ ಸುಳಿಯಲ್ಲಿ ಪ್ರಜೆಗಳು ಮಾತ್ರ ತಟಸ್ಥರಾಗಿಯೇ ಉಳಿದಿರುವರು. ಬ್ರಿಟಿಷರು ಭರತಖಂಡವನ್ನು ಬಿಟ್ಟುಹೋದ ಬಳಿಕ ಹೈದರಾಬಾದು ಸಂಸ್ಥಾನವು ಸ್ವತಂತ್ರ ಆಗಬೇಕು; ಮುಸಲ್ಮಾನರ ರಾಜ್ಯವಾಗಬೇಕೆಂದು ಅಲ್ಲಿಯ ಪ್ರತಿಗಾಮಿಗಳ ಸ್ವಪ್ನ. ಆದರೆ ಈ ಸ್ವಪ್ನವನ್ನು ಕಾಣುತ್ತಿರುವವರು ಸಂಸ್ಥಾನವೆಂದರೇನೆಂಬುದನ್ನೇ ಅರಿತಂತೆ ಕಾಣುವದಿಲ್ಲ. ಸಂಸ್ಥಾನವೆಂದರೆ ಅಲ್ಲಿ ಅರಸುಗೈಯುತ್ತಿರುವ ನಿಜಾಮ ಸಾಹೇಬರದಲ್ಲ. ಅಲ್ಲಿಯೇ ಹುಟ್ಟಿ ಬೆಳೆದು ಬಾಳಿ ಬದುಕುತ್ತಿರುವ ಪ್ರಜೆಗಳದು. ಪ್ರಜೆಗಳ ಒಲವಿನಂತೆ ನಡೆವುದೇ ರಾಜಧರ್ಮ. ಈ ತತ್ವವನ್ನು ನಿಜಾಮ ದೊರೆಗಳು ಸುಲಭವಾಗಿ ತಿಳಿದುಕೊಳ್ಳದೆಯೇ ಇಲ್ಲ. ಆದರೆ ನಿಜಾಮ ಸಾಹೇಬರ ಪರಿವಾರ ದೇವತೆಗಳು ನಿಜಾಮ ಪ್ರಭುಗಳನ್ನು ಅಡ್ಡದಾರಿಗೆ ಒಯ್ಯುವ ಉದ್ದೇಶದಿಂದ ಹೈದರಾಬಾದು ಮುಸಲ್ಮಾನರ ರಾಜ್ಯವಾಗಿರುವದರಿಂದ ಅವರ ಆಜ್ಞಾನುವರ್ತಿಯಾಗಿಯೇ ಪ್ರಜೆಗಳಿರಬೇಕೆಂದೂ ಹಿಂದುಗಳಿಗೆ ಇದು ಬೇಡವಾಗಿದ್ದರೆ ಅವರು ಸ್ಥಳಾಂತರ ಮಾಡಬೇಕೆಂದೂ ಹೇಳುತ್ತಿರುವರು. ಡಾ. ಪಟ್ಟಾಭಿಯವರು ಅವರ ಈ ವಾದಕ್ಕೆ ಸಮರ್ಪಕ ಉತ್ತರವನ್ನು ಕೊಟ್ಟು ೧॥ ಕೋಟಿ ಹಿಂದೂ ಪ್ರಜೆಗಳನ್ನು ಸ್ಥಳಾಂತರಿಸುವದಕ್ಕಿಂತ ನಿಜಾಮ ಸಾಹೇಬರೇ ಅಲ್ಲಿಂದ ಕದಲಬೇಕೆಂದು ಹೇಳಿರುವರು. ನಿಜಾಮ ಸಾಹೇಬರು ತಮ್ಮ ಪರಿವಾರ ದೇವತೆಗಳ ವಿವೇಕಹೀನ ಉಪದೇಶಕ್ಕೆ ಕಿವಿಗೊಡದೆ ಈಗಲಾದರೂ ಪ್ರಜಾನುವರ್ತಿಯಾಗಿ ರಾಜ್ಯಕಾರಭಾರವನ್ನೂ ಸಾಗಿಸಿಕೊಂಡು ಘಟನಾ ಸಮಿತಿಯಲ್ಲಿ ಹಾಗೂ ಒಕ್ಕೂಟದಲ್ಲಿ ಸೇರಬೇಕೆಂದು ಸೂಚಿಸುತ್ತೇವೆ.

## ಲೋಕಶಾಲೆಗಳ ಬೆಳವಣಿಗೆ

ಕಾಂಗ್ರೆಸ ಮಂತ್ರಿಮಂಡಲವು ೧೯೪೬ ರಲ್ಲಿ ಅಧಿಕಾರ ಸ್ವೀಕಾರ ಮಾಡಿದ ಕೂಡಲೆ ಅನೇಕ ಯೋಜನೆಗಳನ್ನು ಮಾಡಿತು. ಲೋಕಶಾಲೆಗಳ ಯೋಜನೆಯು ಅಂತಹ ಯೋಜನೆಗಳಲ್ಲೊಂದು. ಕಾಂಗ್ರೆಸ ಸರಕಾರವು ಈ ಯೋಜನೆಯನ್ನು ಬಳಕೆಯಲ್ಲಿ ತರುವ ಮುನ್ನವೇ ಅಧಿಕಾರತ್ಯಾಗ ಮಾಡುವ ಪ್ರಸಂಗ ಬಂತು. ಆದರಿಂದ ಕಾಂಗ್ರೆಸ ಮಂತ್ರಿಮಂಡಲದ ಅನೇಕ ಯೋಜನೆಗಳಂತೆ ಇದೂ ಕೂಡ ನೆನೆಗುದಿಗೆ ಬಿದ್ದಿತು. ಹೊಸಬಗೆಯ ಈ ಮಾಧ್ಯಮಿಕ ಶಾಲೆಯ ವೈಶಿಷ್ಟ್ಯವೆಂದರೆ ಇಂಗ್ಲೀಷ ಭಾಷಾ ಜ್ಞಾನವೊಂದನ್ನುಳಿದು ಎಲ್ಲ ವಿಷಯಗಳ ಅಭ್ಯಾಸವನ್ನು ಮ್ಯಾಟ್ರಿಕ್ ಮಟ್ಟದವರೆಗೆ ಮಾಡಿಸುವದೇ ಆಗಿದೆ. ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯ ಮುಖಾಂತರ ಸಂಸ್ಕೃತ, ಇತಿಹಾಸ, ಭೂಗೋಲ, ಗಣಿತ, ಸಾಮಾನ್ಯ ವಿಜ್ಞಾನ, ಪೌರಶಾಸ್ತ್ರ, ಒಕ್ಕಲತನ, ನೂಲುವದು, ನೇಯುವದು, ಬಡಿಗತನ, ಚಿತ್ರಕಲೆ ಮತ್ತು ಸಂಗೀತ ಮೊದಲಾದವುಗಳ ಅಧ್ಯಯನವನ್ನು ಮಾಡಿಸಲಾಗುವದೆಂದು ಹೇಳಲಾಗುತ್ತಿದೆ. ಇಷ್ಟು ವ್ಯಾಪಕವಾದ ಹಾಗು ಉಪಯುಕ್ತವಾದ ಅಭ್ಯಾಸಕ್ರಮವನ್ನಿಟ್ಟುಕೊಂಡ ಶಾಲೆಗಳು ಲೋಕಪ್ರಿಯವಾಗಲು ವಿಲಂಬವಾಗಬಾರದು. ಆದರೆ ದೇಶದ ದುರ್ದೈವದಿಂದ ಆಂಗ್ಲಭಾಷೆಯ ಅಭ್ಯಾಸದ ಮೋಹವು ಜನತೆಯನ್ನಷ್ಟೇ ಅಲ್ಲದೆ ಹೊಸ ಶಿಕ್ಷಣದ ತಳಹದಿ ಹಾಕಬಯಸುವ ಮಂತ್ರಿಗಳನ್ನೂ ಬಿಟ್ಟಂತೆ ತೋರುವದಿಲ್ಲ. ಅಂತೆಯೇ ಅವರು ಈ ಶಾಲೆಗಳಲ್ಲಿ ಕಲಿತು ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಕೇವಲ ಪ್ರಾಥಮಿಕ ಶಿಕ್ಷಕರ ಉದ್ಯೋಗದಲ್ಲಿ ಸೇರಲು ಬರುವದೆಂದು ಹೇಳಿರುವರು. ಲೋಕಶಾಲೆಗಳ ಅಭ್ಯಾಸಕ್ರಮವು ಮ್ಯಾಟ್ರಿಕ್ ಮಟ್ಟದ್ದೆಂಬ ಮಾತು ಮಂತ್ರಿಮಂಡಲಕ್ಕೆ ಮನಃಪೂರ್ವಕ ಒಪ್ಪಿಗೆಯಾಗಿದ್ದರೆ ಅಂತಹ ಅಭ್ಯಾಸಕ್ರಮವನ್ನು ಪೂರ್ಣಗೊಳಿಸಿದ ವಿದ್ಯಾರ್ಥಿಗೆ ಆಡಳಿತದ ಬೇಕಾದ ಶಾಖೆಯಲ್ಲಿ ಕೆಲಸಕ್ಕೆ ಸೇರಲು ದಾರಿ ತೆರೆದಿಡಬೇಕು. ಸರಕಾರವು ಅದೇಕೋ ಹೀಗೆ ದಾರಿಯನ್ನು ತೆರೆದಿಟ್ಟಿಲ್ಲ. ಇದರಿಂದ ಅವುಗಳು ಲೋಕಪ್ರಿಯವಾಗಲು ತೊಂದರೆಯಾಗಿದೆ. ಸರಕಾರದವರು ಕೂಡಲೆ ಈ ವಿಷಯವನ್ನು ಪರಿಶೀಲಿಸಿ ನಾವು ಸೂಚಿಸಿದಂತೆ ಎಲ್ಲ ಶಾಖೆಗಳಲ್ಲಿಯೂ ಲೋಕಶಾಲಾ ಪ್ರಮಾಣಪತ್ರಧಾರಿಗಳಿಗೆ ಪ್ರವೇಶ ದೊರೆವುದೆಂದು ಪ್ರಕಟನೆಯನ್ನು ಹೊರಡಿಸಬೇಕು.

# ಪೂರ್ವ-ಪಶ್ಚಿಮ ಪಾಕಿಸ್ತಾನಗಳ ನಡುವೆ ದಾರಿ ಬೇಕು

## ಬ್ಯಾ. ಜಿನ್ನಾರ ಹೊಚ್ಚ ಹೊಸ ಬೇಡಿಕೆ—ಹಿಂದುಸ್ತಾನದ ವಿಭಜನೆಗೆ ಸಂರಕ್ಷಣದೃಷ್ಟಿಯಿಂದ ವಿರೋಧ-ಪಾಕಿಸ್ತಾನಕ್ಕೊಂದು ಘಟನಾಸಮಿತಿ?

ವೈಸರಾಯರು ಮಂತ್ರಿಮಂಡಲದೊಡನೆ ಮಾತುಕತೆಗಾಗಿ ಇಂಗ್ಲಂಡಿಗೆ ತೆರಳಿದಂದಿನಿಂದ ಹಿಂದೀ ರಾಜಕಾರಣದ ಗುರುತ್ವಮಧ್ಯ ಲಂಡನಿಗೆ ವರ್ಗಾಯಿಸಲ್ಪಟ್ಟಿದೆ. ವಾರವಿಡೀ ಲಂಡನ್ನಿನಿಂದ ಬಣ್ಣ ಬಣ್ಣದ ತರ್ಕವಿತರ್ಕಗಳು ಹೊರಡುತ್ತಿವೆ. ಮುಂಚಿನ ದಿನದ ಸುದ್ದಿಗೆ ಮರುದಿನ ವಿರುದ್ಧ ಸುದ್ದಿ ಹೊರಡುತ್ತಿದೆ.

ಈ ಎಲ್ಲ ಪರಸ್ಪರ ವಿರುದ್ಧ ಸುದ್ದಿಗಳಲ್ಲಿ ಒಂದು ವಿಷಯದಲ್ಲಿ ಮಾತ್ರ ಮತಭೇದವಿಲ್ಲ: ಅದೆಂದರೆ ವೈಸರಾಯ ಲಾರ್ಡ ಮೌಂಟ ಬ್ಯಾಟನ್ನರು ಅಧಿಕಾರ ದಾನಕ್ಕಾಗಿ ತಯಾರಿಸಿದ ಯೋಜನೆಗೆ ಹಿಂದುಸ್ತಾನದ ವಿಭಜನೆಯೇ ಆಧಾರವಾಗಿದೆಯೆಂಬುದು. ಅದೇ ಪ್ರಕಾರ ತಾ. ೨೬ಕ್ಕೆ ಕರೆದ ಧುರೀಣರ ಸಭೆಯನ್ನು ಜೂನ ೨ಕ್ಕೆ ಮುಂದೂಡಲು ಕಾರಣವಾದರೂ ವೈಸರಾಯರ ಯೋಜನೆಯ ಬಗ್ಗೆ ಬ್ರಿಟಿಶ ಮಂತ್ರಿಮಂಡಲದ ಹಾಗು ಸಶಸ್ತ್ರ ಬಲಗಳ ಕೆಲ ಪ್ರಮುಖರ ಅಸಂತುಷ್ಟಿಯೇ ಕಾರಣವಾಗಿತ್ತೆಂಬ ಬಗ್ಗೆ ಯಾವ ಸಂಶಯವೂ ಉಳಿದಿಲ್ಲವೆನ್ನಬಹುದು. ವೈಸರಾಯರನ್ನು ಕರೆಸಿಕೊಂಡಿರುವದು ಈ ಮತಭೇದವನ್ನು ಹೋಗಲಾಡಿಸಿ ಸರ್ವ ಸಮ್ಮತವಾದ ಯೋಜನೆಯೊಂದಿಗೆ ಹಿಂದೀ ಧುರೀಣರನ್ನೆದುರಿಸುವ ಸಿದ್ಧತೆಗಾಗಿಯೇ ಎಂದು ನಂಬಲಡ್ಡಿಯಿಲ್ಲ.

### ಸಂರಕ್ಷಣೆಯೆ ಮುಖ್ಯ ಸಮಸ್ಯೆ

ಹಿಂದುಸ್ತಾನದ ವಿಭಜನೆಯ ವಿಷಯದಲ್ಲಿ ಬ್ರಿಟಿಶ ಸರಕಾರವನ್ನು ಹಿಂಜರಿಯುವಂತೆ ಮಾಡುತ್ತಿರುವದು ಸಂರಕ್ಷಣೆಯ ತೊಡಕೊಂದೇ ಎಂದು ತೋರುತ್ತದೆ. ಜಿನ್ನಾ ಸಾಹೇಬರೇನೇ ಹೇಳಲಿ, ಹಿಂದುಸ್ತಾನದ ಸಶಸ್ತ್ರ ಬಲಗಳ ವಿಭಜನೆಯ ಪ್ರಶ್ನೆ ಕೆಲವರು ಹೇಳುವಷ್ಟು ಸರಳವಾಗಿಲ್ಲ. ಬ್ರಿಟಿಶ ಆಳಿಕೆಯ ಕಾಲದಲ್ಲೆಲ್ಲ ಹಿಂದುಸ್ತಾನವನ್ನು ಒಂದೇ ಘಟಕವಾಗಿ ಬಗೆದು ಸಂರಕ್ಷಣದ ಶಾಖೆಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಇಂದು ವಿಭಜನೆಯಾಗಲೇ ಬೇಕಾದರೆ ದೇಶದ ಕೆಲಭಾಗಗಳು ವಿದೇಶಿಯರಿಗೆ ಸುಲಭವಾಗಿ ಬಲಿಯಾಗಬಹುದು. ಒಟ್ಟಿನ ಮೇಲೆ ಹಿಂದೀ ಸಂರಕ್ಷಣೆಯು ಬಲುಹು ಕಡಿಮೆಯಾಗುವದೆಂಬುದು ನಿಸ್ಸಂಶಯ. "ದುಸ್ಸಾಹಸಕ್ಕಾಗಿ ಪ್ರಸಿದ್ಧರಾದ ಲಾರ್ಡ ಮೌಂಟ ಬ್ಯಾಟನ್ನರು ಈ ತೊಡಕುಗಳನ್ನು ಲೆಕ್ಕಿಸದಿದ್ದರೂ ಬ್ರಿಟಿಶ ಸರಕಾರದ ಮಿಲಿಟರಿ ಸಲಹೆಗಾರರು, ಏಕೆ, ಅಮೇರಿಕನ್ ಯುದ್ಧತಜ್ಞರು ಕೂಡ, ಹಿಂದುಸ್ತಾನದ ವಿಭಜನೆಗೆ ವಿರುದ್ಧರಿದ್ದಾರೆಂದು ಹೇಳಲಾಗಿದೆ. ಹಿಂದುಸ್ತಾನದ ಮುಖ್ಯ ಸೇನಾಪತಿ ಆಚಿನಲೆಕ್ಕರೇ ಮೌಂಟಬ್ಯಾಟನ್ ಯೋಜನೆಗೆ ಮಿಲಿಟರಿ ಕಾರಣಗಳಿಗಾಗಿ ಖಂಡಿತ ವಿರೋಧವನ್ನು ಪ್ರದರ್ಶಿಸಿದರಂತೆ. ಎಷ್ಟರವರೆಗೆಂದರೆ ಈ ಪ್ರಶ್ನೆಯ ಮೇಲೆ ಅವರು ರಾಜೀನಾಮೆ ಕೊಡಲು ಕೂಡ ಸಿದ್ಧರಾಗಿದ್ದರೆಂದು ವರದಿಯಾಗಿತ್ತು. (ಈಗಾಗಲೆ ಅವರು ರಾಜೀನಾಮೆ ಕೊಟ್ಟಿದ್ದಾರೆಂಬ ಹಾರು ಸುದ್ದಿಗೆ ಪುಷ್ಟಿ ದೊರೆತಿಲ್ಲ). ಹಿಂದೀ ಸಂರಕ್ಷಣೆಯನ್ನು ಚಿಂತಿಸುವಾಗ ಬ್ರಿಟಿಶರು ಬೆಳೆಯುತ್ತಿರುವ ರಶಿಯನ್ ವಿಸ್ತರಣೆಯ ಗಂಡಾಂತರವನ್ನು ಎಂದೂ ಮರೆಯುವಂತಿಲ್ಲ. ಹಿಂದೀ ಸಶಸ್ತ್ರಬಲದ ವಿಭಜನೆಯಾದ ಪಕ್ಷದಲ್ಲಿ ಏಶಿಯಾದಲ್ಲೆಲ್ಲ ರಶಿಯಾದ ಸೈನ್ಯ ಶಕ್ತಿಯೇ ಎಲ್ಲಕ್ಕೂ ಪ್ರಬಲವಾಗುವದು. ರಶಿಯಾದ ಆಜ್ಞಾಧಾರಕರಂತಿರುವ ಕಮ್ಯುನಿಸ್ಟರೂ ಹಿಂದುಸ್ತಾನದಲ್ಲಿ ಸಾಕಷ್ಟು ಬೇರುಬಿಟ್ಟಿದ್ದಾರೆಂದು ಅವರಿಗೆ ಗೊತ್ತು. ಈ ವಿದ್ಯಮಾನ ಬ್ರಿಟಿಶರನ್ನು ಬೆಚ್ಚಿಸದೆ ಇಲ್ಲ. ಆದುಕಾರಣ ವಿಭಜನೆಯೆಂತೇ ಆದರೂ ಹಿಂದುಸ್ತಾನದ ಸಶಸ್ತ್ರ ಬಲಗಳು ಅಖಂಡವಾಗಿಯೇ ಉಳಿಯಬೇಕೆಂದು ಕ್ಲಾಡ್ ಆಚಿನಲೆಕ್ಕರು ಯುದ್ಧನೀತಿಯ ಹೆಸರಲ್ಲಿ ಹಟಹಿಡಿದಿದ್ದಾರೆಂದು ತಿಳಿಯುತ್ತದೆ.

### ವೈಸರಾಯರ ಮೂಗು ಮೇಲಾಯಿತು?

ಆದರೆ ವೈಸರಾಯರು ಇಂಗ್ಲಂಡಿಗೆ ಹೋದಂದಿನಿಂದ ಭಿನ್ನಾಭಿಪ್ರಾಯಗಳು ತಿಳಿಯಾಗುತ್ತಿರುವಂತೆ ಕಾಣುತ್ತದೆ. ಈಗಾಗಲೆ ಕೈಕೊಳ್ಳಬೇಕಾದ ಮಾರ್ಗದ ಬಗ್ಗೆ ಬ್ರಿಟಿಶ ಮಂತ್ರಿಮಂಡಲದಲ್ಲಿ ವಿಶಾಲಪ್ರಾಯ ಐಕಮತ್ಯವಾಗಿದೆಯಂತೆ. ವಿವರಗಳನ್ನು ನಿರ್ಧರಿಸುವದೊಂದೇ ಉಳಿದಿದೆ. ಶುಕ್ರವಾರ ತಾ. ೨೩ ರೊಳಗೆ ಮಾತುಕತೆಗಳು ಮುಗಿದು ನಿರ್ಧಾರವಾಗಬಹುದೆಂದು ಮುಖ್ಯಮಂತ್ರಿ ಕ್ಲೆಮೆಂಟ ಆಟ್ಲಿಯವರು ನಂಬಿದ್ದಾರೆಂಬುದು ರಾಯಟರ ಸುದ್ದಿಗಾರನು ಬರೆಯುತ್ತಾನೆ. ವೈಸರಾಯರು ಮಂಗಳವಾರ ತಪ್ಪಿದರೆ ಬುಧವಾರ ಹಿಂದುಸ್ತಾನಕ್ಕೆ ಹೊರಡಬಹುದು. ಮಾರ್ಗರೇಟವಲ್ಲಿ ಸೇರಲಿರುವ ಬ್ರಿಟಿಶ ಕೂಲಿಕಾರ ಪಕ್ಷದ ಪರಿಷತ್ತಿನಿಂದ ತಾ. ೨೬ಕ್ಕೆ ಮುಖ್ಯ ಮಂತ್ರಿಗಳು ಮರಳಿದೊಡನೆ ಹಿಂದುಸ್ತಾನದ ಬಗ್ಗೆ ಔಪಚಾರಿಕ ನಿರ್ಣಯಕ್ಕಾಗಿ ಬ್ರಿಟಿಶ ಮಂತ್ರಿಮಂಡಲದ ಪೂರ್ಣ ಸಭೆ ಸೇರುವದೆಂದು ತೋರುವದು. ಹೀಗೆ ಈ ವಾರವೇ ಮಾತುಕತೆ ಮುಗಿಯುವದೆಂದು ಹೆಚ್ಚು ಕಡಿಮೆ ಅಧಿಕೃತವಾಗಿ ತಿಳಿಯುವದರಿಂದ ವಾಯಿಸರಾಯರಿಗೂ ಮಂತ್ರಿಮಂಡಲಕ್ಕೂ ಒಮ್ಮತವಾಗಿದೆಯೆಂದು ನಂಬಲಡ್ಡಿಯಿಲ್ಲ. ಸರ್ ಸ್ಟಾಫರ್ಡ ಕ್ರಿಪ್ಸರಿಗೆ ಇನ್ನಾದರೂ ಕೊನೆಗಳಿಗೆಯಲ್ಲಿ ಹಿಂದೀ ಧುರೀಣರೆಲ್ಲರೂ ಮೇ ೧೬ ರ ಘೋಷಣೆಯಲ್ಲಿ ಹೇಳಿದ ಯೋಜನೆಯನ್ನೇ ಒಪ್ಪುವರೆಂಬ ಧೈರ್ಯವಿದೆಯಂತೆ. ಆದರೆ ಅದಕ್ಕೆ ಸಮ್ಮತಿಸುವಂತೆ ಜಿನ್ನಾರನ್ನು ಆರಾಧಿಸಿ ವಿಫಲರಾದ ಮೌಂಟಬ್ಯಾಟನ್ನರೂ ಲಾರ್ಡ ಇಸ್ಮೆಯವರೂ ಈ ಬಗ್ಗೆ ಅಷ್ಟೊಂದು ಆಸೆಯನ್ನಿಟ್ಟುಕೊಂಡಂತಿಲ್ಲ. ಆದುದರಿಂದ ಜೂನ ೨ಕ್ಕೆ ದಿಲ್ಲಿಯಲ್ಲಿ ಸೇರಲಿರುವ ಹಿಂದೀ ಧುರೀಣರ ಸಭೆಯಲ್ಲಿ ವಾಯಿಸರಾಯರು ಮತ್ತೊಮ್ಮೆ ಮೇ ೧೬ ರ ಘೋಷಣೆಯನ್ನು ಸ್ವೀಕರಿಸಲು ವಿನಂತಿ ಮಾಡಿಕೊಂಡು ಅದು ಸಾಧ್ಯವಾಗದೆ ಹೋದರೆ, ಹಿಂದೀ ಧುರೀಣರ ಮುಂದೆ ತಮ್ಮ ವಿಭಜನ ಯೋಜನೆಯನ್ನು ಮಂಡಿಸಬಹುದು. ಒಟ್ಟಿನ ಮೇಲೆ ಈ ಆಯಕಟ್ಟಿನ ಪ್ರಸಂಗದಲ್ಲಿ ನಿರ್ಣಯ ಮಾಡುವ—ಅದನ್ನು ಶೀಘ್ರದಲ್ಲಿಯೇ ಅವರು ಮಾಡಬೇಕಾಗುವದು—ಹೊಣೆಯನ್ನು ಹಿಂದೀ ಧುರೀಣರ ಮೇಲೆಯೇ ಹಾಕುವರೆಂದು ಇದೀಗ ಬಂದ ವರದಿಗಳಿಂದ ತಿಳಿಯುತ್ತದೆ.

### ವಿಭಜನೆಯ ರೂಪರೇಷೆ

ಹಿಂದೀ ವಿಭಜನೆಯ ಕೆಲಸ ನಾಳೆ ಜೂನ ತಿಂಗಳಿಂದಲೇ ಆರಂಭವಾಗುವದೆಂದು ಕೆಲವರು ಅಭಿಪ್ರಾಯಪಡುತ್ತಿದ್ದಾರೆ. ಹಿಂದುಸ್ತಾನದ ವಿಭಜನೆಯಾಗಬೇಕಾದರೆ ಬಂಗಾಲ ಪಂಜಾಬಗಳ ವಿಭಜನೆಯೂ ಆಗಿ ತೀರಬೇಕೆಂದು ವೈಸರಾಯರ ಯೋಜನೆಯಲ್ಲಿ ಕಾಣಿಸಲಾಗಿದೆಯಂತೆ. ಪಶ್ಚಿಮ ಬಂಗಾಲದ (ಅಂದರೆ ಮುಸ್ಲಿಮೇತರ ಬಂಗಾಲದ) ಭಾಗದಲ್ಲಿರುವ ಕಲಕತ್ತೆಯನ್ನು "ಸ್ವತಂತ್ರ" ನಗರವನ್ನಾಗಿಸಬೇಕೆಂದು ಮುಸ್ಲಿಮರು ಬೇಡುತ್ತಿದ್ದಾರೆ. ಆದರೆ ಮೇ ೧೬ ರ ಘೋಷಣೆಯಲ್ಲಿ ಹಿಂದುಸ್ತಾನವನ್ನು ಜಾತೀಯ ತಳಹದಿಯ ಮೇಲೆ ಪಾಲು ಮಾಡುವದಾದರೆ ಕಲಕತ್ತೆ ಹಿಂದೂ ಭಾಗಕ್ಕೆ ಸೇರಬೇಕೆಂದು ಉಲ್ಲೇಖಿಸಲಾಗಿದೆಯೆಂಬುದನ್ನು ಇಲ್ಲಿ ನೆನೆದುಕೊಳ್ಳಬಹುದು. ಬಹಳ ಮಾಡಿ ಆಸಾಮದ ಸಿಲ್ಹಟ ಜಿಲ್ಲೆ ಮುಸ್ಲಿಂ ಬಂಗಾಲಕ್ಕೆ ಸೇರಬಹುದೆಂದು ತೋರುತ್ತದೆ. ಪಂಜಾಬದ ವಿಭಜನೆಯನ್ನು ಚೆನಾಬ ನದಿಯ ಗುಂಟ ಮಾಡಬೇಕೆಂದು ಸೀಖರು ಒತ್ತಾಯಗೊಳಿಸುತ್ತಿದ್ದಾರೆ.

### ಎರಡು ಘಟನಾ ಸಮಿತಿ ?

ಜಿನ್ನಾ ಸಾಹೇಬರು ಕೊನೆಗೂ ಪಾಕಿಸ್ತಾನದ ಹಟವನ್ನೇ ಸಾಧಿಸಿದರೆ ಈಗಿನ ಘಟನಾ ಸಮಿತಿಯನ್ನು ವಿಸರ್ಜಿಸಿ ಹಿಂದುಸ್ತಾನ ಪಾಕಿಸ್ತಾನಗಳಿಗೆ ಬೇರೆಯೆ ಘಟನಾ ಸಮಿತಿಗಳನ್ನು ಕರೆಯಬಹುದೆಂದು ಕೆಲವರ ಊಹೆ. "ಪಾಕಿಸ್ತಾನ ಕಾಣಸತ್ತಿದೆ" ಎಂದು ಚುಂದ್ರಿಗಾರರು ಇಂಗ್ಲಂಡಿನಲ್ಲಿ ಒಂದು ಸಭೆಯಲ್ಲಿ ಹೇಳಿದರು. ಮುಸ್ಲಿಂಲೀಗ್ ಪ್ರಮುಖರಾದರೂ ಇದೇ ಧೈರ್ಯದಿಂದ ಮುಂದಡಿಯಿಡುತ್ತಿದ್ದಾರೆನ್ನಬಹುದು. ಪಾಕಿಸ್ತಾನದ ಘಟನೆಯನ್ನು ರಚಿಸಲು ಕರಾಚಿಯಲ್ಲಿ ಘಟನಾ ಸಮಿತಿಯನ್ನು ಕರೆಯುವ ಏರ್ಪಾಡುಗಳು ರಭಸದಿಂದ ಸಾಗಿವೆ. ಈ ಘಟನಾ ಸಮಿತಿಯಲ್ಲಿ ೫೬ ಸದಸ್ಯರಿರಬೇಕೆಂದೂ ಅವರಲ್ಲಿ ೩೬ ಪಶ್ಚಿಮ ಪಾಕಿಸ್ತಾನ ಮತ್ತು ೨೦ ಪೂರ್ವ ಪಾಕಿಸ್ತಾನದ ಸದಸ್ಯರಿರಬೇಕೆಂದೂ ಸೂಚಿಸಲಾಗಿದೆ. ಪಂಜಾಬ ಬಂಗಾಲಗಳ ವಿಭಜನೆಯನ್ನು ಅನಿವಾರ್ಯವೆಂದು ಒಪ್ಪಿಕೊಳ್ಳಲು ಲೀಗ ವರ್ಗಗಳು ಸಿದ್ಧವಾಗಿವೆಯೆಂದು ತಿಳಿಯುತ್ತದೆ. ಕಲಕತ್ತೆಯ ಬಗ್ಗೆಯೇ ಅವರ ಚಿಂತೆಯುಂಟು. ಆದರೆ ಲೀಗ ನಾಯಕರ ದಾರಿ ಸುಗಮವಾಗಿಲ್ಲವೆಂದು ತೋರುತ್ತದೆ. ಬಂಗಾಲದ ಅಖಂಡತೆಯನ್ನುಳಿಸಿಕೊಳ್ಳಲು ಸುಹ್ರವರ್ದಿ ಪ್ರಭೃತಿಗಳು ಹಿಂದುಗಳಿಗೆ ಕೆಲ ಸವಲತ್ತುಗಳನ್ನು ಕೊಟ್ಟು ಪಾಕಿಸ್ತಾನದಿಂದ ಅದನ್ನು ಸ್ವತಂತ್ರವಾಗಿ ಮಾಡುವ ಎತ್ತುಗಡೆಯಲ್ಲಿರುವದು "ಇಸ್ಲಾಮಿ ರಾಜ್ಯ"ದ ಪ್ರತಿಪಾದಕರಿಗೆ ರುಚಿಸುತ್ತ ಇಲ್ಲ. ಆದರೆ ಹಿಂದೂ ಭಾಗವನ್ನು ಬೇರ್ಪಡಿಸುವದರಿಂದ ಬಂಗಾಲದ ಆರ್ಥಿಕ ಪರಿಸ್ಥಿತಿ ನಿಕೃಷ್ಟವಾಗುವದೆಂಬ ಭೀತಿಯನ್ನು ಮೂಲದಿಂದ ನಿವಾರಿಸುವದು ಸಾಧ್ಯವಿಲ್ಲ. "ಅಝಾದ ಬಂಗಾಲ"ದ ಚಳವಳಿ ಜಿನ್ನಾಸಾಹೇಬರು ಕಡೆಗಣಿಸುವಷ್ಟು! ದುರ್ಬಲವಿಲ್ಲ. ಇನ್ನು ಸಿಂಧ ಪ್ರಾಂತವೂ "ಸ್ವತಂತ್ರ"ವಾಗಬೇಕೆಂಬ ಒಂದು ಗುಂಪು ಇದ್ದೇ ಇದೆ. ಪಂಜಾಬದ ಬಾಲವಾಗಿ ಬಾಳಲು ಸಿಂಧ ಹಿಂದೆ ಮುಂದೆ ನೋಡುತ್ತಿದೆ. ಗಡಿನಾಡನ್ನು ಸ್ವತಂತ್ರ ಪಠಾಣ ರಾಜ್ಯವಾಗಿ ಮಾಡುವ ಬಗ್ಗೆ ಖಾನಬಂಧುಗಳು ರಭಸದಿಂದ ಪ್ರಚಾರ ನಡೆಸಿದ್ದಾರೆ. ಹೀಗೆ ಪಾಕಿಸ್ತಾನ ಕಟ್ಟಕಡೆಗೆ ಹರಿಹಂಚಾಗಿ ಹೋಗಬಹುದೆಂಬ ಭೀತಿಯೊಂದೇ ಜಿನ್ನಾರನ್ನು ಅಖಂಡ ಹಿಂದುಸ್ತಾನಕ್ಕೆ ಒಪ್ಪಿಸಿದರೆ ಒಪ್ಪಿಸಬೇಕು. ಆದರೆ ಅವರು ಮುಸ್ಲಿಮರನ್ನು ಅತ್ಯುಗ್ರರಾಗಿರಿಸುವ ಮೂಲಕ ಅದರಲ್ಲಿನ ಐಕ್ಯವನ್ನು ಕಾಯ್ದುಕೊಳ್ಳಲು ಯತ್ನಿಸುವಂತೆ ತೋರುತ್ತದೆ. ಆದುದರಿಂದ ಈ ವರೆಗೆ ಬಹಿರಂಗ ಪಡಿಸದ ಹೊಸ ಬೇಡಿಕೆಯೊಂದನ್ನು ಈ ವಾರ ಅವರು ಉಪಸ್ಥಿತಗೊಳಿಸಿದ್ದಾರೆ. ಅದೆಂದರೆ ಪೂರ್ವ ಪಶ್ಚಿಮ ಪಾಕಿಸ್ತಾನಗಳ ನಡುವೆ ಒಂದು "ಅಂಚು" ಬೇಡುವದು. ಇದು ಮುಸ್ಲಿಮರಿಗೆ ಹೋರಾಡಲು ಹೊಸದೊಂದು ವಸ್ತುವನ್ನೊದಗಿಸಬಹುದು. ಇಂಥ ಬೇಡಿಕೆಯೊಂದನ್ನು ಅವರು ಉಪಸ್ಥಿತಗೊಳಿಸುವರೆಂಬ ಸಂಶಯ ಮೊದಲಿಂದಲೂ ಇದ್ದೇ ಇತ್ತು. ಅದೀಗ ಸತ್ಯವಾಗಿ ಪರಿಣಮಿಸಿದೆ. ಬೇಡಿಕೆಯನ್ನು ಮುಂದೊಡ್ಡಿದ ಮಾತ್ರಕ್ಕೆ ಅದಕ್ಕೆ ಮನ್ನಣೆ ದೊರೆತು ಅಭ್ಯಾಸವಾಗಿ ಹೋದ ಅವರು ಹಟಮಾರಿ ಹುಡುಗನಂತಾಗಿ ಹೋದುದರಲ್ಲಿ ಆಶ್ಚರ್ಯವಿಲ್ಲ.

### ಪಾಕಿಸ್ತಾನ ಸಂಸ್ಥಾನಗಳು?

ಈ ನಡುವೆ ಸಂಸ್ಥಾನಿಕ ವರ್ಗಗಳಲ್ಲಿ ವಿಚಿತ್ರ ಸ್ಥಿತ್ಯಂತರಗಳು ಘಟಿಸುತ್ತಿವೆ. ಮುಸ್ಲಿಂ ನರೇಂದ್ರರಿರುವ ಸಂಸ್ಥಾನಗಳು ಪಾಕಿಸ್ತಾನವನ್ನು ಸೇರುವ ಸಂಭವ ಹೆಚ್ಚುಹೆಚ್ಚಾಗಿ ಕಾಣಿಸತೊಡಗಿದೆ. ನಿಜವಾಗಿ ಭೋಪಾಲ ನವಾಬರು ಕಾಂಗ್ರೆಸ್-ಲೀಗ ಒಪ್ಪಂದ ಮಾಡಿಸಲು ಹೆಣಗುತ್ತಿರುವಂತೆ ತೋರಿಸಿಕೊಂಡ ದಿನದಿಂದ ಇಂದಿನವರೆಗೂ ಲೀಗಿನ ಗೂಢಚಾರರಾಗಿ ವರ್ತಿಸುತ್ತಿದ್ದರೇನೊ ಎಂಬ ಸಂಶಯ ಬಲವಾಗಿ ಮೂಡಲು ಸಾಕಷ್ಟು ಕಾರಣವುಂಟು." ಘಟನಾ ಸಮಿತಿಯಲ್ಲಿ ನರೇಂದ್ರರ ಪ್ರವೇಶವನ್ನು ವಿಳಂಬಗೊಳಿಸಲು ಅವರು ಹೆಣಗಿದ್ದಾದರೂ ಇದೇ ಉದ್ದೇಶದಿಂದಿರಬಹುದು. ಏನೇ ಇದ್ದರೂ ನರೇಂದ್ರರಲ್ಲಿ ಅವರ ಬಗ್ಗೆ ತೀಕ್ಷ್ಣ ಅಸಂತೋಷವುಂಟಾಗಿದ್ದು ನರೇಂದ್ರ ಮಂಡಲದಿಂದ ಅವರು ಹೊರಬೀಳುವರೆಂಬ ಸುದ್ದಿ ದಟ್ಟವಾಗಿ ಹಬ್ಬಿದೆ. ಭೋಪಾಲ ಸಂಸ್ಥಾನದಲ್ಲಿ ಪ್ರಜಾ ಚಳವಳಿ ಸಕಾಲದಲ್ಲಿ ಮುಂಗೈ ಕಸುವು ತೋರಿಸದಿದ್ದರೆ — ಪಾಕಿಸ್ತಾನವನ್ನು ಸೇರಬಹುದು. ಅಲ್ಲಿನ ಮುಸ್ಲಿಂ ಲೀಗು ಈಗಾಗಲೆ ಇಂಥ ಬೇಡಿಕೆಯನ್ನು ಮುಂದೊಡ್ಡಿದೆ. ಹೈದರಾಬಾದದಲ್ಲಿ ಮೊನ್ನೆ ಮೊನ್ನೆ ದಿವಾಣರಾಗಿ ಬಂದಿರುವ ಸರ್ ಮಿರ್ಝಾ ಇಸ್ಮಾಯಿಲರು ರಾಜೀನಾಮೆ ಕೊಡುವರೆಂಬ ಸುದ್ದಿಯಾದರೂ ಹೈದರಾಬಾದು ಪಾಕಿಸ್ತಾನವನ್ನು ಸೇರುವದೆಂಬ ಸಂಶಯಕ್ಕೆಡೆಗೊಟ್ಟಿದೆ. ನಿಝಾಮರು ಬ್ರಿಟಿಶ ಸರಕಾರದಿಂದ ಹಿಂದುಸ್ತಾನದ ವಿರುದ್ಧ ಸ್ವರಕ್ಷಣೆಗಾಗಿ ಸೈನ್ಯ ಸಹಾಯ ಕೇಳಿದ್ದಾರೆಂದೂ ಅದನ್ನು ಆಟ್ಲಿಯವರು ನಿರಾಕರಿಸಿದರೆಂದೂ ಹೇಳಲಾಗಿದೆ. ಹೈದರಾಬಾದಿನ ಇತ್ತಿಹಾದುಲ್ ಮುಸ್ಲಿಂ ಲೀಗ ಸಭೆ ಮಿರ್ಝಾರಲ್ಲಿ ಅವಿಶ್ವಾಸವನ್ನು ಸೂಚಿಸಿದೆ. ಮುಸ್ಲಿಮರು ಹೈದರಾಬಾದಿನಲ್ಲಿ ಆಳುವ ವರ್ಗವೆಂದು ಆ ಸಂಸ್ಥೆಯ ಹೇಳಿಕೆಯುಂಟು.

---

## ಸಂಬಳ ಹೆಚ್ಚಿಸಿದ್ದರಿಂದ ಹೆಚ್ಚು ಕೆಲಸ ಮಾಡಬೇಕು

### ನೌಕರರಿಗೆ ಲಿಯಾಕತ ಅಲ್ಲಿಖಾನರ ಬಿನ್ನಹ

ಕೇಂದ್ರ ವೇತನ ಮಂಡಳದ ವರದಿಯನ್ನು ಕೂಲಂಕಷವಾಗಿ ವಿಚಾರಮಾಡಿನೋಡಿದರೆ ಕೂಲಿಕಾರರಿಗೂ ಮಧ್ಯವರ್ಗದವರಿಗೂ ಬಹಳ ಲಾಭವಾಗಿದೆಯೆಂದು ಕಂಡುಬರುವದೆಂದು ಹೊಸದಿಲ್ಲಿಯ ಆಕಾಶವಾಣಿಯಿಂದ ತಾ. ೨೦ರಲ್ಲಿ ಮಾತನಾಡುತ್ತ ಕೇಂದ್ರ ಸರಕಾರದ ಅರ್ಥಮಂತ್ರಿಗಳಾದ ಶ್ರೀ ಲಿಯಾಕತ ಅಲಿಖಾನರು ಹೇಳಿದರು. 'ಕೇಂದ್ರವೇತನ ಮಂಡಳದ ಸದಸ್ಯರಲ್ಲಿ ಆರ್ಥಿಕ, ಔದ್ಯೋಗಿಕ ಮತ್ತು ವೈಜ್ಞಾನಿಕ ಕ್ಷೇತ್ರಗಳಲ್ಲಿ ಹೆಸರು ಪಡೆದವರೂ ಶಾಸನ ಸಭೆಗಳ ಸದಸ್ಯರೂ ಇದ್ದಾರೆ. ಯುದ್ಧಕಾಲದಲ್ಲಿ ಪದಾರ್ಥಗಳ ಬೆಲೆಯು ಮಿತಿಮೀರಿದುದರಿಂದ ಸರಕಾರಿ ನೌಕರರಿಗೆ ಬಹಳ ಕಷ್ಟವಾಯಿತೆಂಬುದನ್ನರಿತು ಅವರ ವೇತನದ ಪ್ರಮಾಣಗಳನ್ನು ಪುನರ್ವಿಮರ್ಶಿಸಲು ಹಾಗೂ ಕನಿಷ್ಠ ಸಂಬಳವನ್ನು ನಿಶ್ಚಯಿಸಲು ಸರಕಾರವು ನಿರ್ಧರಿಸಿತು. ಕೇಂದ್ರ ವೇತನ ಮಂಡಳದ ಸಲಹೆಗಳನ್ನು ಸಂಕ್ಷೇಪವಾಗಿ ಈ ರೀತಿ ಕಾಣಿಸಬಹುದು. [೧] ಸದ್ಯದ ಪರಿಸ್ಥಿತಿಯನ್ನು ಸುಲಕ್ಷಿಸಿ ಕೂಲಿಕಾರರಿಗೆ ೫೫ರೂ.ಗಳು ಮತ್ತು ಮಧ್ಯಮ ವರ್ಗದವರಿಗೆ ೯೦ರೂ.ಗಳು ಜೀವನ ನಿರ್ವಹಣೆಕ್ಕೆ ಅಗತ್ಯವಾದ ಕನಿಷ್ಠ ವೇತನವೆಂದು ಗಣಿಸತಕ್ಕದ್ದು, [೨] ಕೇಂದ್ರ ಸರಕಾರದ ವಿವಿಧ ತರದ ನೌಕರರಿಗೆ ಎಲ್ಲೆಡೆಗೆ ಸಾಮಾನ್ಯ ವೇತನ ಪ್ರಮಾಣಗಳಿರಬೇಕು. ಬಹುವೆಚ್ಚದ ಪಟ್ಟಣಗಳಲ್ಲಿ ಮನೆಬಾಡಿಗೆ ಭತ್ತೆ ಮತ್ತು ಪರಿಹಾರಗಳನ್ನು ಕೊಡಬೇಕು. [೩] ಸದ್ಯಕ್ಕೆ ಸರಕಾರೀ ನೌಕರರಿಗೆ ಮೂಲವೇತನವಲ್ಲದೆ ತುಟ್ಟಿಭತ್ತೆ ಸಿಗಬೇಕು, ಕಾಲಾನುಗುಣವಾಗಿ ಅದರ ಪ್ರಮಾಣ ಹೆಚ್ಚು ಕಡಿಮೆಯಾಗಬೇಕು. [೪] ಮೂಲ ವೇತನವು ಹೆಚ್ಚಿದ್ದರೆ ತುಟ್ಟಿಭತ್ತೆ ಮತ್ತು ಪರಿಹಾರಗಳು ಆ ಪ್ರಮಾಣದಿಂದ ಕಡಿಮೆ ಇರಬೇಕು; [೫] ಕೆಳಗಿನ ವರ್ಗ, ವಿಧೇಯ ವರ್ಗ ಮೊದಲಾದ ಭೇದಭಾವ ತೆಗೆದು ಹಾಕಿ ನೌಕರರಲ್ಲಿ ೧,೨,೩, ಮತ್ತು ೪ ನೆಯ ಎಂಬ ವರ್ಗಗಳಷ್ಟನ್ನೇ ಇಡಬೇಕು. ಸರಕಾರದ ಪೂರ್ಣ ನಿರ್ಣಯವು ಹೊರಬಿದ್ದ ಮೇಲೆ ಅದರಿಂದ ಕೂಲಿಕಾರರಿಗೆ ಎಷ್ಟು ಕಲ್ಯಾಣವಾಗಿದೆ ಎಂಬುದು ತಿಳಿದು ಬಂದಿರುವುದು. ಮಂಡಳದ ಸೂಚನೆಗಳನ್ನು ಅಮಲಿನಲ್ಲಿ ತರಬೇಕಾದರೆ ಕೇಂದ್ರಸರಕಾರಕ್ಕೆ ೩೪ ಕೋಟಿ ರೂಪಾಯಿ ಹೆಚ್ಚು ವೆಚ್ಚ ಬರುತ್ತದೆ. ಹಿಂದುಸ್ತಾನದ ಪ್ರತಿಯೊಂದು ರೂಪಾಯಿಯೂ ಅದರ ಪುನರ್ರಚನೆಗಾಗಿ ಬೇಕಾಗಿರುವ ಈ ಕಾಲದಲ್ಲಿ ಇಷ್ಟು ಹಣ ವೆಚ್ಚಮಾಡುವ ಭಾರ ಬಹಳ ದೊಡ್ಡದು. ಸರಕಾರಕ್ಕೆ ಈ ಭಾರವನ್ನು ಹೊರುವದು ಸಾಧ್ಯವಾಗಬೇಕಾದರೆ ಸರಕಾರೀ ನೌಕರರು ತಮ್ಮ ಕೆಲಸದಲ್ಲಿ ಪೂರ್ಣ ಮನಸ್ಸು ಹಾಕಬೇಕು, ಎಂದು ಮುಂತಾಗಿ ನೌಕರ ಜನರಿಗೆ ಬಿನ್ನಹ ಮಾಡಿಕೊಂಡರು.

### ದುಡಿತದ ವೇಳೆಯ ಕಡಿತ

ರೇಲ್ವೆ ಸಮಸ್ಯೆಗಳ ಚರ್ಚೆಯ ಮಧ್ಯಸ್ಥರಾದ ನ್ಯಾ. ಮೂ. ರಾಜಾಧ್ಯಕ್ಷರವರು ತಮ್ಮ ಸೂಚನೆಗಳಲ್ಲಿ ರೇಲ್ವೆ ಕೆಲಸಗಾರರಲ್ಲಿ ಅಖಂಡ ಪರಿಶ್ರಮಿಗಳು, ಅಖಂಡವಾಗಿ ಸಾಮಾನ್ಯ ಕೆಲಸ ಮಾಡುವವರು ಮತ್ತು ನಡುನಡುವೆ ಕೆಲಸ ಮಾಡುವವರು ಎಂಬ ಮೂರು ವಿಧವಾಗಿ ವಿಭಾಗಿಸಿ ೧ ನೆಯ ವರ್ಗದವರ ಕೆಲಸದ ಕಾಲವನ್ನು ವಾರಕ್ಕೆ ೬೦ ತಾಸುಗಳಿಂದ ೪೮ಕ್ಕೂ ೨ನೆಯ ವರ್ಗದವರನ್ನು ಕಾಲವನ್ನು ೬೦ ರಿಂದ ೫೪ ತಾಸುಗಳಿಗೂ, ೩ ನೆಯ ವರ್ಗದವರ ಕಾಲವನ್ನು ೮೦ ರಿಂದ ೭೫ ತಾಸುಗಳಿಗೂ ಇಳಿಸಬೇಕೆಂದು ಹೇಳಿದ್ದಾರೆ. ಅವರು ರೇಲ್ವೆ ಕೂಲಿಕಾರರ ಪರಿಸ್ಥಿತಿ ಸುಧಾರಿಸುವ ಸಂಬಂಧದಲ್ಲೂ ರಜೆ ಹಾಗೂ ಇತರ ಸೌಕರ್ಯಗಳ ಸಂಬಂಧದಲ್ಲೂ ವಿಶಿಷ್ಟ ಸೂಚನೆಗಳನ್ನು ಮಾಡಿರುವರೆಂದು ತಿಳಿಯುತ್ತದೆ. ಇದನ್ನು ಜಾರಿಯಲ್ಲಿ ತಂದರೆ ರೇಲ್ವೆಯವರು ೮೦ ಸಾವಿರ ಹೆಚ್ಚು ಜನರನ್ನು ಕೆಲಸಕ್ಕೆ ತೆಗೆದುಕೊಳ್ಳಬೇಕಾಗುವದು. ಅದಕ್ಕಾಗಿ ೫ ಕೋಟಿ ಹೆಚ್ಚು ವೆಚ್ಚ ಹಿಡಿಯುವದು.

## ಪಾಲಿಸ್ತಾನ ಸತ್ಯಶೋಧಕ ಸಮಿತಿ

ಹದಿನೆಂಟು ದಿನಗಳ ಕಾರ್ಯಕಲಾಪದನಂತರ ಪಾಲಿಸ್ತಾನ ಪರಿಸ್ಥಿತಿಯ ಬಗ್ಗೆ ಪರಿಹಾರವನ್ನು ಸೂಚಿಸಲು ೧೧ ರಾಷ್ಟ್ರಗಳನ್ನೊಳಗೊಂಡ ಸತ್ಯಶೋಧನ ಸಮಿತಿಯೊಂದನ್ನು ಆರಿಸಿ ತಾ.೧೫ಕ್ಕೆ ಯುಕ್ತರಾಷ್ಟ್ರ ವಿಶೇಷಾಧಿವೇಶನ ಮುಕ್ತಾಯವಾಯಿತು. ಅರಬ ರಾಷ್ಟ್ರಗಳನ್ನೂ ಪಂಚ ಮಹಾರಾಷ್ಟ್ರಗಳನ್ನೂ ಈ ಸಮಿತಿಯಿಂದ ಹೊರಗಿರಿಸಬೇಕೆಂಬ ಅಮೇರಿಕನ್ ಇಚ್ಛೆಗೇ ವಿಜಯ ದೊರೆತು ಹಿರಿ ರಾಷ್ಟ್ರಗಳನ್ನು ಸೇರಿಸಬೇಕೆಂಬ ರಶಿಯನ್ ಪ್ರಯತ್ನ ವಿಫಲವಾಯಿತು.

ಸಮಿತಿಗೆ ಆರಿಸಲ್ಪಟ್ಟ ಸದಸ್ಯ ರಾಷ್ಟ್ರಗಳಿವು:

ಹಿಂದುಸ್ತಾನ, ಅಸ್ಟ್ರೇಲಿಯಾ, ಪೇರು, ಝೆಕೊಸ್ಲೊವಾಕಿಯಾ, ಇರಾಣ, ನೆದರ್ಲಂಡ್ಸ, ಸ್ವೀಡನ್, ಉರುಗುವೇ, ಗ್ವಾಟೆಮಾಲಾ, ಯುಗೊಸ್ಲಾವಿಯಾ ಮತ್ತು ಕೆನಡಾ.

ಈ ಸತ್ಯಶೋಧಕ ಸಮಿತಿ ಸೆಪ್ಟಂಬರ ೧ ರೊಳಗಾಗಿ ತನ್ನ ವರದಿಯನ್ನೊಪ್ಪಿಸಬೇಕು.

ಪಾಲಿಸ್ತಾನದ ಸ್ವಾತಂತ್ರ್ಯದ ಪ್ರಶ್ನೆಯನ್ನು ವಿಚಾರಿಸುವ ಅಧಿಕಾರವನ್ನು ಈ ಸಮಿತಿಗೆ ಕೊಡದಿದ್ದದ್ದನ್ನು ಪ್ರತಿಭಟಿಸಲು ಅರಬ ರಾಷ್ಟ್ರಗಳು ರಾಜಕೀಯ ಸಮಿತಿಯ ಕೊನೆಯ ದಿನದ ಕಾರ್ಯಕಲಾಪಗಳನ್ನು ಬಹಿಷ್ಕರಿಸಿದ್ದವು.

✽ ಪಾಲಿಸ್ತಾನದ ಅರಬರ ಪರವಾಗಿ ಅತಿಶಯ ಸಾಮರ್ಥ್ಯದಿಂದ ವಾದಿಸಿದ ಹಿಂದೀ ಪ್ರತಿನಿಧಿ ಅಸಫ ಅಲ್ಲಿಯವರು ಕೊನೆಯ ದಿನದ ಮಹಾಸಭೆಯಲ್ಲಿ ೪೦ ಕೋಟಿ ಹಿಂದೀಯರ ಮತ್ತು ೮ ಕೋಟಿ ಇಂಡೋನೇಶಿಯನ್ನರ ಹೆಸರಲ್ಲಿ ಯುಕ್ತ ರಾಷ್ಟ್ರ ಸಭೆಗೆ ಎಚ್ಚರಿಕೆ ಕೊಟ್ಟದ್ದು:

"ಪಾಲಿಸ್ತಾನವಿಂದು ಮಾನವ ಕುಲದ ಮನಸ್ಸಾಕ್ಷಿಯ ಪರೀಕ್ಷಾಸ್ಥಾನವಾಗಿದೆ... ಇಲ್ಲಿ ಮಾಡಿದ ನಿರ್ಣಯ ತಪ್ಪಾದರೆ ಜಗತ್ತು ಇಬ್ಭಾಗವಾಗುವದು; ಭೂಮಿಯ ಮೇಲೆ ಶಾಂತಿ ಉಳಿಯಲಾರದು. ಪಾಲಿಸ್ತಾನದಲ್ಲಿ ಶಾಂತಿ ಭಂಗವಾದರೆ ಮೂರನೆ ಮಹಾಯುದ್ಧ ನಿಶ್ಚಯವಾಗಿಯೂ ಉಂಟಾಗುವದು. ಇದರಲ್ಲಿ ನನಗೇನೂ ಸಂದೇಹವಿಲ್ಲ."

✽ ಅರಬರ ವಿಚಾರಗಳಿಗೆ ಮೊದಲು ದೊರೆತುದಕ್ಕಿಂತ ಕೊನೆಗೆ ಹೆಚ್ಚು ಗಮನ ದೊರೆತರೂ ಈ ಸತ್ಯಶೋಧನ ಸಮಿತಿಯ ನಿರ್ಣಯಗಳ ಬಗ್ಗೆ ಅರಬ ರಾಷ್ಟ್ರಗಳು ಸಾಶಂಕವಾಗಿಯೆ ಇವೆ. ಯಾವಾಗಲೂ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳ ಬಾಲದಂತೆ ವರ್ತಿಸುತ್ತಿರುವ ಉತ್ತರ ಮತ್ತು ದಕ್ಷಿಣ ಅಮೇರಿಕನ್ ರಾಷ್ಟ್ರಗಳು ನಾಲ್ಕು ಸಮಿತಿಯಲ್ಲಿ ಸ್ಥಾನ ಪಡೆದಿವೆ. ಅಮೇರಿಕೆಯ ಯಹೂದ್ಯಪಕ್ಷಪಾತ ಜಗತ್ಪ್ರಸಿದ್ಧವಾದುದು.

✽ ರಶಿಯಾದ ಧೋರಣೆ ಮುಖ್ಯವಾಗಿ ಬ್ರಿಟಿಶವಿರೋಧಿಯಾಗಿತ್ತಲ್ಲದೆ ನ್ಯಾಯಪಕ್ಷಪಾತಿಯಾಗಿತ್ತೆನ್ನಬರುವದಿಲ್ಲ. ಪಾಲಿಸ್ತಾನದ ಮೇಲೆ ಬ್ರಿಟಿಶರ ಆದಿಷ್ಟ ಆಡಳಿತೆ ಅಯಶಸ್ವಿಯಾದುದರಿಂದ ಅದನ್ನು ಮುಕ್ತಾಯಗೊಳಿಸಬೇಕೆಂದು ರಶಿಯನರು ಸಾಧಿಸಿದರು. ಪಾಲಿಸ್ತಾನವನ್ನು ಯಹೂದ್ಯ, ಅರಬ ಪ್ರದೇಶಗಳೆಂದು ವಿಂಗಡಿಸಿ ದ್ವಿ-ರಾಷ್ಟ್ರೀಯ ರಾಜ್ಯವನ್ನು ಸ್ಥಾಪಿಸಬೇಕೆಂದೂ ಹಿಟ್ಲರನಿಗೆ ೬೦ ಲಕ್ಷ ಯಹೂದ್ಯರು ಆಹುತಿಯಾಗಿದ್ದು ಅವರಿಗೆ ಪಾಲಿಸ್ತಾನದಲ್ಲಿ ಆಶ್ರಯ ಕೊಡುವದು ಯೋಗ್ಯವೆಂದೂ ವಾದಿಸಿ ಅವರು ಯಹೂದ್ಯರ ಪಕ್ಷದಲ್ಲಿಯೇ ನಿಂತರೆನ್ನಬಹುದು. "ಪೂರ್ವ ಯುರೋಪಿನಲ್ಲಿ ಯಹೂದ್ಯರಿಗೆ ಸ್ಥಾನವಿಲ್ಲ" ಎಂದು ಅವರು ಹೇಳಿದ್ದನ್ನು ನೋಡಿದರೆ ಝೆಕೊಸ್ಲೊವಾಕಿಯಾ ಯುಗೊಸ್ಲಾವಿಯಾಗಳಾದರೂ ಅರಬರಿಗೆ ಪ್ರತಿಕೂಲವಾಗಿಯೆ ವರ್ತಿಸಬಹುದೆಂದು ತೋರುತ್ತದೆ. ಹೀಗೆ ಬಹುಸಂಖ್ಯಾಕ ಸದಸ್ಯರಿಂದ ಒಂದಲ್ಲ ಒಂದು ಕಾರಣಕ್ಕಾಗಿ ನ್ಯಾಯವನ್ನಪೇಕ್ಷಿಸಬರುವದಿಲ್ಲ.

✽ ಅಸಫ ಅಲ್ಲಿಯವರ ಅಪೂರ್ವ ಸಾಮರ್ಥ್ಯ ಅವರಿಗೆ ಸರ್ವತ್ರ ಪ್ರಶಂಸೆಯನ್ನು ದೊರಕಿಸಿದ್ದಲ್ಲದೆ ಹಿಂದುಸ್ತಾನ—ಅರಬ ರಾಷ್ಟ್ರಗಳ ಮೈತ್ರಿಯನ್ನು ದೃಢಗೊಳಿಸಿತು. ಇಜಿಪ್ತ ಯುವಕ ಪಕ್ಷದ ಮುಂದಾಳಾದ ಅಹಮದ ಹುಸೇನರು ಹೇಳಿದ್ದು: "ಅರಬರಿಗೂ ಹಿಂದುಸ್ತಾನದ ಹಿಂದೂ—ಮುಸ್ಲಿಮರಿಗೂ ಇರುವ ನಂಟನ್ನು ಬಿಗಿಗೊಳಿಸಲು ಅಸಫ ಅಲ್ಲಿಯವರಷ್ಟು ಬೇರಾರೂ ಶ್ರಮಿಸಿಲ್ಲ. ಹಿಂದುಸ್ತಾನದ ವಿಷಯಗಳಲ್ಲಿ ನಾವು ಕೈಹಾಕುವ ಮಾತು ಮುಗಿದೇಹೋಯಿತು."

ವಿಶೇಷಾಧಿವೇಶನದ ಅಧ್ಯಕ್ಷರಾಗಿದ್ದ ಅರಾನ್ಹಾ ಅವರು ತಮ್ಮ ಕೊನೆಯ ದಿನದ ಅಧ್ಯಕ್ಷ ಭಾಷಣದ ಪ್ರತಿಯನ್ನು ರಾಯಭಾರಿ ಅಸಫ ಅಲ್ಲಿಯವರಿಗೆ ಕೊಟ್ಟಾಗ ಅದರ ಮೇಲೆ ಪೋರ್ತುಗೀಸ ಭಾಷೆಯಲ್ಲಿ ಬರೆದುದು:




"ಮಹಾ ದೇಶವೊಂದರ ಸುಯೋಗ್ಯ ಪ್ರತಿನಿಧಿಯಾದ ಮಹಾನಾಗ್ಮಿ, ಮಹಾವ್ಯಕ್ತಿಗೆ ಆದರಪೂರ್ವಕವಾಗಿ."

## ಪ್ರಬಲರಾಷ್ಟ್ರ ಸಂಬಂಧ

ಎರಡು ದಿನಗಳ ವಿದೇಶ ಧೋರಣ ಚರ್ಚೆಯನ್ನು ಪಾರ್ಲಮೆಂಟಿನಲ್ಲಿ ಪ್ರಾರಂಭಿಸುತ್ತ ಬ್ರಿಟಿಶ ವಿದೇಶ ಮಂತ್ರಿ ಅರ್ನೆಸ್ಟ ಬೆವಿನ್ನರು ಪೌರ್ವಾತ್ಯ ಪಾಶ್ಚಿಮಾತ್ಯ ಪ್ರಬಲ ರಾಜ್ಯಗಳಲ್ಲಿನ ಪರಸ್ಪರ ಸಂಬಂಧ ಸುಧಾರಿಸದಿದ್ದರೆ "ಜಗತ್ತು ಯಾವ ದಾರಿ ಹಿಡಿಯುವದೋ ಊಹಿಸುವದು ಯಾರಿಗೂ ಸಾಧ್ಯವಿಲ್ಲ." ಎಂದರು. ಮಾಸ್ಕೋದ ವಿದೇಶ ಮಂತ್ರಿಚತುಷ್ಟಯದ ಸಭೆಯ ವರದಿಯನ್ನು ಅವರು ಪಾರ್ಲಮೆಂಟಿನ ಮುಂದಿರಿಸಿ ರಶಿಯಾಕ್ಕೂ ತಮಗೂ ಇರುವ ಭಿನ್ನಾಭಿಪ್ರಾಯಗಳ ಸ್ವರೂಪವನ್ನು ತಿಳಿಸಿದರು. ಪಾಟ್ಸಡ್ಯಾಂ ಕರಾರನ್ನು ಮುರಿಯುವದು ತಮಗೆ ಬೇಕಾಗಿಲ್ಲ, ಆದರೆ ರಶಿಯಾಕ್ಕೆ ಜರ್ಮನಿಯಿಂದ ಕೊಡುವ ಪರಿಹಾರದಿಂದ ಇತರ ಮಿತ್ರ ರಾಷ್ಟ್ರಗಳಿಗೆ ಹಾನಿಯಾಗತಕ್ಕದ್ದಲ್ಲವೆಂದರು. ಜರ್ಮನಿಯ ಆರ್ಥಿಕ ಐಕ್ಯಕ್ಕೆ ರಶಿಯನ್ನರು ಒಪ್ಪಿದರೆ ಈ ಪರಿಹಾರ ಪ್ರಶ್ನೆಯನ್ನು ತಾವು ಪುನರಾಲೋಚಿಸಬಹುದೆಂದು ಅವರ ಹೇಳಿಕೆಯಾಗಿತ್ತು. ಒಟ್ಟಿನ ಮೇಲೆ ಜರ್ಮನಿಯಲ್ಲಿ ಅಧಿಕಾರದ ಕೇಂದ್ರೀಕರಣವಾಗದಂತೆ, ಅರ್ಥಾತ್ ಮತ್ತೊಮ್ಮೆ ಸರ್ವಾಧಿಕಾರದ ಉದಯವಾಗದಂತೆ ಸ್ವಾಯತ್ತ ಪ್ರಾಂತಗಳ ಸಂಯುಕ್ತ ಘಟನೆ ಸ್ಥಾಪಿತವಾಗಬೇಕು, ಪೋಲಂಡಿಗೆ ಜರ್ಮನಿಯಿಂದ ಕಿತ್ತುಕೊಂಡು ಕೊಟ್ಟಿರುವ ಭಾಗ, ಒಕ್ಕಲತನದ ಮಹತ್ವದ ಭಾಗವಾಗಿರುವದರಿಂದ ಅದರಲ್ಲಿ ಕೆಲವಂಶವನ್ನಾದರೂ ಜರ್ಮನಿಗೆ ತಿರುಗಿ ಕೊಡಿಸಬೇಕು, ಜರ್ಮನಿಯ ನಿಶ್ಶಸ್ತ್ರೀಕರಣದ ಬಗ್ಗೆ ಅಮೇರಿಕೆ ರಚಿಸಿದ ಯೋಜನೆಯನ್ನು, ಅದು ಸದೋಷವಾಗಿದ್ದರೂ ರಶಿಯಾ ಒಪ್ಪಬೇಕು ಇತ್ಯಾದಿ ಅವರ ಸೂಚನೆಗಳಾಗಿದ್ದವು. ಅಂಗ್ಲೋ—ಸೋವಿಯಟ್ ಒಪ್ಪಂದದ ಮಾತುಕತೆಗಳನ್ನು ಆಸ್ಥೆಯಿಂದ ಮುಂದೊತ್ತುವದಾಗಿ ಹೇಳಿ "ಬ್ರಿಟಿಶ ರಾಷ್ಟ್ರದ ಪರವಾಗಿ ನಾನು ಸರ್ವ ಪ್ರಯತ್ನವನ್ನೂ ಮಾಡುವೆ ಆದರೆ ತೀರ್ಮಾನ ಮಾಡುವ ಕೆಲಸ ಬ್ರಿಟಿಶರ ಕೈಲಿ ಮಾತ್ರವಿಲ್ಲ" ಎಂದರು.

## ಚರ್ಚಿಲ್ಲರ ಸಂಯುಕ್ತ ಯುರೋಪು

ಅಧ್ಯಕ್ಷ ಟ್ರೂಮನ್ನರ ಕಮ್ಯುನಿಸ್ಟ—ರಶಿಯಾ ವಿರೋಧಿ ರಾಜಕೀಯ-ಆರ್ಥಿಕ ಯೋಜನೆಗಳಿಂದ ಯುರೋಪಿನ ಪ್ರತಿಗಾಮಿಗಳ ಒಣಗಿದ ಆಶೆಗಳು ತಿರುಗಿ ಚಿಗುರಿದಂತಿದೆ. ಯುರೋಪಿನಲ್ಲಿ ಪ್ರಚಂಡ ಶಕ್ತಿಯಾಗಿ ರಶಿಯಾ ತಲೆಯೆತ್ತಿದಂದಿನಿಂದ "ಸಂಯುಕ್ತ ಯುರೋಪಿನ" ಯೋಜನೆಯ ಮೂಲಕ 'ಯುರೋಪಿಯನ್ ಸಂಸ್ಕೃತಿ'ಯನ್ನು ಉಳಿಸಿಕೊಳ್ಳುವ ಹುಚ್ಚು ನಿಷ್ಠುರ ರಾಷ್ಟ್ರೀಯ ವಿನ್‌ಸ್ಟನ್ ಚರ್ಚಿಲ್ಲರಿಗೆ ಹಿಡಿದಿತ್ತು. ಆದರೆ ಅದಕ್ಕೆ ಸಾಕಷ್ಟು ಬೆಂಬಲ ಸಿಗಲಿಲ್ಲವಾಗಿ ಅವರು ಕೆಲ ತಿಂಗಳು ತೆಪ್ಪಗಿದ್ದರು. ಈಗ ಟ್ರೂಮನ್ನರು ಕಮ್ಯುನಿಝಂನ ವಿರುದ್ಧ ಕೋಟ್ಯಂತರ ಡಾಲರುಗಳನ್ನು ಸುರಿಯಲು ಸಿದ್ಧರಾದುದರ ಉಪಯೋಗ ಪಡೆದು ಯುರೋಪಿನ ನಕಾಶೆಯಲ್ಲಿ ಮಸುಕಾಗುತ್ತ ನಡೆದಿರುವ ಕೆಂಬಣ್ಣಕ್ಕೆ ಹೊಳಪು ಕೊಟ್ಟು ಬ್ರಿಟಿಶರ ಕಳೆದು ಹೋದ ಮುಂದಾಳ್ತನವನ್ನು ತಿರುಗಿ ಗಳಿಸಿಕೊಳ್ಳಬಹುದೆಂದು ಅವರಿಗೆ ತೋರಿರಬೇಕು. ಕಳೆದವಾರ ಲಂಡನ್ನಿನ ಅಲ್ಬರ್ಟ ಭವನದಲ್ಲಿ ಸೇರಿದ ಕಿಕ್ಕಿರಿದ ಸಭೆಯಲ್ಲಿ ಅವರು ಸಂಯುಕ್ತ ಯುರೋಪಿನ ತಮ್ಮ ಯೋಜನೆಯನ್ನು ಬಿತ್ತರಿಸಿದರು. "ಯುರೋಪು ಇಂದು ಹೊಲಸು ಕೊಂಪೆಯಾಗಿದೆ, ಸುಟ್ಟ ಮನೆಯಾಗಿದೆ, ಪೀಡೆ ದ್ವೇಷಗಳ ತೌರುಮನೆಯಾಗಿದೆ...... ಇದು ಯುರೋಪಿನ ಭವಿತವ್ಯ ನಿರ್ಣಯದ ಕಾಲ. ಯುರೋಪು ಒಂದಾಗಲು ಒಪ್ಪಿದರೆ ಅದರಿಂದ ಎಲ್ಲರಿಗೂ ಹಿತ. ಇಲ್ಲದಿದ್ದರೆ ಬರಬಹುದಾದ ವಿಪತ್ತನ್ನು ಮುಂಗಾಣುವದಸಾಧ್ಯ" ಎಂದು ಬೆದರಿಸಿದರವರು. ಅವರ ಯೋಜನೆಯ ಸಾರವಿಷ್ಟು: ಎಲ್ಲ ಪಶ್ಚಿಮ ಯುರೋಪಿಯನ್ ರಾಜ್ಯಗಳು ಸಂಯುಕ್ತ ರಾಜ್ಯವಾಗಬೇಕು; ಜರ್ಮನಿಯನ್ನು ತಿರುಗಿ ಸೌಹಾರ್ದದಿಂದ ರಾಷ್ಟ್ರಗಳ ಮಂಡಲಕ್ಕೆ ಕರೆತರಬೇಕು; ಈ ಯೋಜನೆಯ ಮುಂದಾಳ್ತನವನ್ನು ಇಂಗ್ಲಂಡು ಮತ್ತು ಫ್ರಾನ್ಸು ವಹಿಸಬೇಕು. ಇದು ರಶಿಯಾದ ವಿರುದ್ಧ ನಡೆಸಿದ ಕೂಟವಲ್ಲೆಂದು ಚರ್ಚಿಲ್ಲರು ಶಪಥ ಮಾಡಿದರು. ಆದರೆ ರಶಿಯನ್ನರು ಅದನ್ನು ನಂಬುವರೆ?

## ಕಾಮನ್‌ವೆಲ್ತ ನಾಗರಿಕತ್ವ

ಬ್ರಿಟಿಶ ಕಾಮನ್‌ವೆಲ್ತಿನ ಎಲ್ಲ ಸ್ವತಂತ್ರ ಘಟಕಗಳಿಗೆ ಒಂದೇ ಸಾಮಾನ್ಯ ನಾಗರಿಕತ್ವವನ್ನು ಸ್ಥಾಪಿಸುವ ಒಪ್ಪಂದವೊಂದನ್ನು ಮಾಡಿಕೊಳ್ಳಲಾಗಿದೆ. ಈ ಒಪ್ಪಂದದಲ್ಲಿ ದಕ್ಷಿಣ ಅಫ್ರಿಕ, ಕೆನಡಾ, ಅಸ್ಟ್ರೇಲಿಯಾ, ನ್ಯೂಝಿಲಂಡ ಐಯರ್ಲಂಡ, ಮತ್ತು ಬ್ರಿಟನ್ ಇವು ಭಾಗ ವಹಿಸಿವೆ. "ಬ್ರಿಟಿಶ ಪ್ರಜೆ" ಯೆಂಬ ಶಬ್ದಗಳು ಇನ್ನು ಮುಂದೆ ಲೋಪವಾಗಿ "ಬ್ರಿಟಿಶ ಕಾಮನ್‌ವೆಲ್ತಿನ ನಾಗರಿಕ" ಎಂಬ ಶಬ್ದಗಳು ಪಾಸಪೋರ್ಟಗಳಲ್ಲಿ ಕಾಣಿಸಲ್ಪಡಬಹುದು. ಬ್ರಿಟಿಶ ಕಾಮನ್‌ವೆಲ್ತಿನ ನಾಗರಿಕರು ಸಮಾನವಾದ ಹಕ್ಕುಬಾಧ್ಯತೆಗಳುಳ್ಳವರಾಗುವರು. ಇದಕ್ಕೆ ಅವಶ್ಯಕ ಕಾಯಿದೆಗಳನ್ನು ಪ್ರತಿ ರಾಜ್ಯವೂ ತನ್ನ ಪಾರ್ಲಮೆಂಟಿನಲ್ಲಿ ಉಪಸ್ಥಿತಗೊಳಿಸುವದು. ಬ್ರಿಟಿಶ ಕಾಮನ್‌ವೆಲ್ತಿನ ದೃಢ ಬಂಧನಕ್ಕೆ ಇದು ಸಹಾಯಕವಾದೀತು.

## ಇಟಾಲಿಯನ್ ಮಂತ್ರಿಮಂಡಲದ ರಾಜೀನಾಮೆ

ಇಟಲಿಯ ಮುಖ್ಯಮಂತ್ರಿ ಸಿನಾರ ಗಾಸ್ಪೇರಿ ಇಟಲಿಯ ಅಧ್ಯಕ್ಷ ನಿಕೋಲಾರ ಕೈಯಲ್ಲಿ ತಮ್ಮ ಮಂತ್ರಿಮಂಡಲದ ರಾಜೀನಾಮೆಯನ್ನು ಕಳೆದ ವಾರ ಒಪ್ಪಿಸಿದರು. ಈಗ ಅನೇಕ ದಿನಗಳಿಂದ ಈ ಮಂತ್ರಿಮಂಡಲದ ಬಿಕ್ಕಟ್ಟು ಉದ್ಭೂತವಾಗಿದ್ದು ಅಧ್ಯಕ್ಷರ ಒತ್ತಾಯದಿಂದಾಗಿ ಗಾಸ್ಪೇರಿಯವರು ಕೈಯನ್ನು ತಡೆಹಿಡಿದಿದ್ದರು. ಆದರೆ ಸಿನಾರ ನೆನ್ನಿಯವರ ಸಾಮ್ಯವಾದಿ ಪಕ್ಷದವರು ಒಂದು ಪ್ರಕಟನೆ ಹೊರಡಿಸಿ, ಅನವಶ್ಯಕವಾಗಿ ಗಾಸ್ಪೇರಿಯವರು ಮಂತ್ರಿಮಂಡಲ ಬಿಕ್ಕಟ್ಟನ್ನು ನಿರ್ಮಿಸುತ್ತಿದಾರೆಂದೂ ಇದಕ್ಕೋಸ್ಕರವೇ ಅವರು ಸಾಮ್ಯವಾದಿಗಳ ಆರ್ಥಿಕ ಯೋಜನೆಯನ್ನು ತಿರಸ್ಕರಿಸಿದರೆಂದೂ ಸಾರಿದ್ದರಿಂದ ಈ ರಾಜೀನಾಮೆಯ ಪ್ರಸಂಗ ಬಂತು. ಸಾಮ್ಯವಾದಿ ಪ್ರಭಾವವನ್ನು ಉಚ್ಚಾಟನೆಗೊಳಿಸುವ ಅಧ್ಯಕ್ಷ ಟ್ರೂಮನ್ನರ ಯೋಜನೆಯಿಂದ ಫ್ರಾನ್ಸಿನ ನಂತರ ಇಟಲಿಯಲ್ಲಿ ಮಂತ್ರಿಮಂಡಲ ಬಿಕ್ಕಟ್ಟೊದಗಿದ್ದು ಗಮನಾರ್ಹವಾಗಿದೆ.

## ಇಜಿಪ್ತದಿಂದ "ಚಲೇ ಜಾವ್"

ಬ್ರಿಟಿಶ ವಿದೇಶ ಮಂತ್ರಿ ಬೆವಿನ್ನರು ವಿದೇಶ ಧೋರಣ ಚರ್ಚೆಯಲ್ಲಿ ಇಜಿಪ್ತದ ಬಗ್ಗೆ ಎತ್ತಿದ ಕೆಲ ಪ್ರಸ್ತಾಪಗಳಿಂದ ಅಂಗ್ಲೋ ಇಜಿಪ್ಶನ್ ವಿವಾದ ಮತ್ತೆ ಕೆದರಿದೆ. ಇಜಿಪ್ಶನ್ ಮುಖ್ಯಮಂತ್ರಿ ನೊಕ್ರಾಸಿ ಪಾಶಾ ಅವರೊಂದು ಹೇಳಿಕೆ ಹೊರಡಿಸಿ, ಬ್ರಿಟಿಶ ಸೈನ್ಯಗಳು ಇನ್ನೂ ಇಜಿಪ್ತದಲ್ಲಿರುವದರಿಂದ ದೇಶದ ಸಾರ್ವಭೌಮತ್ವಕ್ಕೆ ಧಕ್ಕೆ ಬಂದಿದೆಯೆಂದು ಹೇಳಿ ಇಜಿಪ್ಶನ್ನರು ಒಮ್ಮತದಿಂದ ಬ್ರಿಟಿಶ ಸೈನ್ಯ ಹೊರಟು ಹೋಗಬೇಕೆಂದು ಬೇಡುತ್ತಾರೆಂದು ಸ್ಪಷ್ಟಗೊಳಿಸಿದರು. "ನಾವು ಹೇಳಿದ ಬಗೆಯ ಹೊಸ ಒಪ್ಪಂದಕ್ಕೆ ಸಹಿ ಹಾಕಿರಿ. ಇಲ್ಲದಿದ್ದರೆ ಹಳೆ ಒಪ್ಪಂದದಂತೆ ನಾವಿಲ್ಲಿ ಉಳಿಯುವೆವು" ಎಂದು ಬ್ರಿಟಿಶರು ಹೇಳುತ್ತಿರುವದು ಅನ್ಯಾಯ. ಇಜಿಪ್ತ ಈ ವಿಚಾರವನ್ನು ಯುಕ್ತ ರಾಷ್ಟ್ರ ಸಂಘದ ಮುಂದೆ ಮಂಡಿಸುವದು, ಎಂದರವರು. ಸುದಾನದ ಪ್ರತ್ಯೇಕತಾಚಳವಳಿಗೆ ಬ್ರಿಟಿಶರು ಬೇಕೆಂದು ಪ್ರೋತ್ಸಾಹ ಕೊಡುತ್ತಾರೆಂದು ನೊಕ್ರಾಸಿಯವರ ಆರೋಪ.

## ಬ್ರಹ್ಮದೇಶದ ರಾಜ್ಯಘಟನೆ

ಬ್ರಹ್ಮೀ ಘಟನಾ ಸಮಿತಿಯಲ್ಲಿ ನೂರಕ್ಕೆ ೯೫ ಕ್ಕಿಂತಲೂ ಹೆಚ್ಚು ಸ್ಥಾನ ಪಡೆದಿರುವ ಜನರಲ್ ಅಂಗ್ ಸಾನರ ಫ್ಯಾಸಿಸ್ಟ ವಿರೋಧಿ ಸಂಘದ ಪರವಾಗಿ ಬ್ರಹ್ಮದೇಶದ ಹೊಸರಾಜ್ಯಘಟನೆಯ ಕರಡನ್ನು ಸಿದ್ಧಗೊಳಿಸಲಾಗಿದೆ. ಅದರ ಮುಖ್ಯ ಅಂಶಗಳು ಇಂತಿವೆ:

✽ ಬ್ರಹ್ಮದೇಶದಲ್ಲಿ ಈ ವರೆಗೆ ಬ್ರಿಟಿಶಬ್ರಹ್ಮದೇಶವೆನಿಸಿದ್ದ ಭಾಗಗಳೆಲ್ಲ ಸೇರುವವು. ಅದು ಪ್ರಜಾರಾಜ್ಯ [ರಾಜಸತ್ತೆಯಲ್ಲ] ವಾಗುವದು.

✽ ಅದು ಒಕ್ಕೂಟ ಸ್ವರೂಪದ್ದಿದ್ದು ಬ್ರಹ್ಮಿಭಾಷೆಯನ್ನಾಡುವ ರಾಜ್ಯ, ಇತರ ಭಾಷೆಗಳನ್ನಾಡುವ ಭಾಗಗಳಲ್ಲಿ ಭಾಷಾ, ಸಾಂಸ್ಕೃತಿಕ ಐಕ್ಯ, ಭೌಗೋಲಿಕ ಐಕ್ಯ, ಆರ್ಥಿಕ ಸ್ವಯಂಪೂರ್ಣತೆಗಳಿದ್ದು ಪ್ರತ್ಯೇಕತೆಯನ್ನು ಕಾಯ್ದುಕೊಳ್ಳಬಯಸುವ "ಒಕ್ಕೂಟ ರಾಜ್ಯಗಳು", ಮೊದಲಿನ ಎರಡು ಗುಣಗಳಿದ್ದರೂ ಆರ್ಥಿಕ ಸ್ವಯಂಪೂರ್ಣತೆಯಿಲ್ಲದ "ಸ್ವಾಯತ್ತರಾಜ್ಯಗಳು" ಹಾಗು ಪ್ರಮುಖ ಅಲ್ಪಸಂಖ್ಯಾಕ ಭಾಗಗಳಾದ "ರಾಷ್ಟ್ರೀಯ ಪ್ರದೇಶಗಳು" ಇವೆಲ್ಲವುಗಳ ಸಮಾವೇಶವಾಗಿರುವದು.

✽ "ಒಕ್ಕೂಟ ರಾಜ್ಯ"ಗಳೂ "ಸ್ವಾಯತ್ತರಾಜ್ಯ"ಗಳೂ ಗಡಿಭಾಗದಲ್ಲಿದ್ದರೆ ಮಾತ್ರ ಅವುಗಳಿಗೆ ಹತ್ತು ವರ್ಷದ ಮೇಲೆ ಸಿಡಿದು ಹೋಗುವ ಹಕ್ಕು ಇದೆ.

✽ ಶಾಸನಸಭೆಯಲ್ಲಿ ಪ್ರತಿನಿಧಿ ಸಭೆ, ಜನಾಂಗಗಳ ಸಭೆ ಎಂಬ ವಿಭಾಗಗಳಿದ್ದು ಅದು ಸಾರ್ವತ್ರಿಕ ಪ್ರೌಢಮತದಾನದಿಂದ ಆರಿಸಲ್ಪಡುವದು.

✽ ಒಕ್ಕೂಟದ ಅಧ್ಯಕ್ಷನನ್ನು ಎರಡೂ ಶಾಸನ ಸಭೆಗಳು ಸೇರಿ ಆರಿಸುವವು.

✽ ಒಕ್ಕೂಟ ಸರಕಾರದ ಮುಖ್ಯ ಮಂತ್ರಿಯನ್ನು ಅಧ್ಯಕ್ಷರು ನೇಮಿಸಬೇಕು. ಅದಕ್ಕೆ ಪ್ರತಿನಿಧಿ ಸಭೆಯ ಸಮ್ಮತಿ ಬೇಕು. "ಒಕ್ಕೂಟ ರಾಜ್ಯ"ಗಳನ್ನು ಅವುಗಳು ಆರಿಸಿದ "ಗವರ್ನರ" ರೂ "ಸ್ವಾಯತ್ತ ರಾಜ್ಯ"ಗಳನ್ನು ಅವು ಆರಿಸಿದ ಮುಖ್ಯ ಆಡಳಿತ ಅಧಿಕಾರಿಯೂ "ರಾಷ್ಟ್ರೀಯ ಪ್ರದೇಶ" ಗಳನ್ನು ಒಕ್ಕೂಟ ಅಧ್ಯಕ್ಷನು ನೇಮಿಸಿದ "ಆಡಳಿತಗಾರ" ರೂ ಆಳುವರು.

ಕರ್ಮವೀರ
ಹರಿಜನ ಪುರವಣಿ

# ತಾನೇ ಸಾಲಗಾರ, ತಾನೇ ನ್ಯಾಯಾಧೀಶ, ತಾನೇ ಪಂಚ

(ಜೆ. ಸಿ. ಕುಮಾರಪ್ಪನವರಿಂದ)

ಹಿಂದೊಂದು ಸಂಚಿಕೆಯಲ್ಲಿ ಹಿಂದುಸ್ತಾನದ ಸ್ಟರ್ಲಿಂಗ್ ಶಿಲ್ಕುಗಳ ನಿಜವಾದ ಸ್ವರೂಪವನ್ನು ವಿವರಿಸಿದ್ದೆವು. ಹಿಂದುಸ್ತಾನದ ಹೆಸರಿಗೆ ಆಗಾಗ್ಗೆ ಖರ್ಚು ಹಾಕಿದ ಅನೇಕ ವೆಚ್ಚಗಳೂ ಆ ಮೇಲೆ ನಮ್ಮ ಉತ್ಪನ್ನದಿಂದ ಕೆಲವಂಶವನ್ನು ಬಳಸಿಕೊಂಡು ಹಾಗು ಅಲ್ಲಿಂದ ಸರಕುಗಳನ್ನು ಒಯ್ದು ಆ ಬಗ್ಗೆ ಜಮಾ ಬರೆದ ಅಂಕಿಗಳೂ ಸೇರಿ ಈ ಶಿಲ್ಕು ಸಂಗ್ರಹವಾಯಿತು. ಸರಕುಗಳನ್ನು ಒಯ್ಯುವಾಗ ಕರಾರು ಮಾಡಿಕೊಂಡು ಒಯ್ಯದೆ ಹೆಚ್ಚು ಕಡಿಮೆ ಮುಟ್ಟುಗೋಲು ಹಾಕಿದಂತೆ ಮಾಡಿ ಕಸಿದುಕೊಳ್ಳಲಾಯಿತು. ಈ ಎಲ್ಲ ಸಾಲಗಳನ್ನು ನಿಷ್ಪಕ್ಷಪಾತ ನ್ಯಾಯಮಂಡಲದ ಯೋಗ್ಯ ಪರಿಶೀಲನೆಗೆ ಒಳಪಡಿಸಿದಲ್ಲಿ ಹಿಂದುಸ್ತಾನಕ್ಕೆ ಒಟ್ಟು ೫೬೦೦ ಕೋಟಿ ರೂಪಾಯಿ ಬರಬೇಕಾಗುವದೆಂಬುದನ್ನೂ ನಾವು ತೋರಿಸಿ ಕೊಟ್ಟಿದ್ದೆವು. ಅಲ್ಲದೆಯೇ, ಲಾರ್ಡ ಕ್ಲೈವನ ಕಾಲದಿಂದ ಇದು ವರೆಗೆ ಹಿಂದುಸ್ತಾನದ ಹೆಸರಿಗಾದ ಜಮಾ ಖರ್ಚುಗಳನ್ನೆಲ್ಲ ಪರೀಕ್ಷಿಸಲು ನಿಷ್ಪಕ್ಷಪಾತಿ ನ್ಯಾಯ ಮಂಡಲವೊಂದನ್ನು ನೇಮಿಸಬೇಕೆಂದೂ ಸೂಚಿಸಿದ್ದೆವು.

ಕೆಲ ದಿನಗಳ ಕೆಳಗೆ ಬ್ರಿಟಿಶ ಹಣಕಾಸಿನ ಮಂತ್ರಿಯಾದ ಡಾ. ಹ್ಯೂ ಡಾಲ್ಟನ್ನರು ಬ್ರಿಟನ್ನಿನ ಪ್ರಚಂಡ ಬಲವನ್ನು, ಅದರಿಂದ ಹೆರವರಿಗೆ ಸಲ್ಲಬೇಕಾಗಿರುವ ನ್ಯಾಯವಾದ ಸಾಲವನ್ನು ಮುಳುಗಿಸುವ ಕೆಲಸಕ್ಕೆ ಉಪಯೋಗಿಸುವ ಬೆದರಿಕೆ ಹಾಕಿದರು. ಬಲಾಢ್ಯನ ಶಕ್ತಿಯ ಉಪಯೋಗ ದುರ್ಬಲರನ್ನೂ ಬಡವರನ್ನೂ ರಕ್ಷಿಸುವದರಲ್ಲಿ ಆದರೆ ಮಾತ್ರ ಅದಕ್ಕೆ ಘನತೆ ಪ್ರಾಪ್ತವಾಗುವದಲ್ಲದೆ ಬಡಿಗೆ ಹಿಡಿದವನ ಇಚ್ಛೆಯನ್ನು ನಡೆಸುವಂತೆ ಜಗತ್ತನ್ನು ಬೆದರಿಸಲು ಉಪಯೋಗಿಸಿದರೆ ಅದರ ಸಾರ್ಥಕ್ಯವಾದಂತಾಗಲಿಲ್ಲ.

ಇದೀಗ ಇನ್ನೊಂದು ಸುದ್ದಿ ಬಂದಿದೆ. ಪಾರ್ಲಮೆಂಟಿನಲ್ಲಿ ಕರ್ನಲ ಕ್ರಾಸ್ಟವೈಟ ಅಯರರು ಬ್ರಿಟನ್ನಿನಿಂದ ಸಲ್ಲಬೇಕಾಗಿರುವ ಯುದ್ಧ ಸಾಲಗಳನ್ನು ಬಹಳ ಮಟ್ಟಿಗೆ ಇಳಿಸಲಾಗುವದೆಂಬ ಡಾ. ಡಾಲ್ಟನ್ನರ ಹೇಳಿಕೆ ಬ್ರಿಟಿಶ ಸರಕಾರದ ಧೋರಣೆಗನುಗುಣವಾಗಿದೆಯೇನೆಂದು ಕೇಳಿದಾಗ, ಮುಖ್ಯಮಂತ್ರಿ ಅಟ್ಲೀಯವರು ಹೀಗೆ ಉತ್ತರ ಕೊಟ್ಟರು: "ಸ್ಟರ್ಲಿಂಗ್ ಪ್ರದೇಶದಲ್ಲಿರುವ ದೇಶಗಳ ಬಗ್ಗೆ ಹೇಳುವದಾದರೆ ಈ ಧೋರಣದಲ್ಲಿ ಹೊಸದೇನೂ ಇಲ್ಲ. ಅದು ದಿಸೆಂಬರ ೧೩, ೧೯೪೫ ರ ಆಂಗ್ಲೋ-ಅಮೇರಿಕನ್ ಹಣಕಾಸಿನ ಒಪ್ಪಂದದ ೧೦ ನೆ ಕಲಮಿನಲ್ಲಿ ಉಲ್ಲೇಖಿಸಲ್ಪಟ್ಟಿದೆ."

ತಮಗೆ ಅನುಕೂಲವಾದಾಗ ಈ ಜನರು ಕರಾರುಗಳು ಅನುಲ್ಲಂಘ್ಯವೆಂದೂ ಹೊಣೆಗಳನ್ನು ಪೂರೈಸಲೇ ಬೇಕೆಂದೂ ವಾದಿಸುವರು. ತಮಗೆ ಬೇಡವಾದಾಗ ತಮಗಲ್ಲದೆ ಬೇರಾರಿಗೂ ಸರಿಗಾಣದ ನೆವಗಳನ್ನು ಮುಂದೊಡ್ಡುವರು. ಹಿಂದುಸ್ತಾನ ಸಾಲಗಾರನಾಗಿದ್ದಾಗ ಈ ಸಾಲಗಳು ಸರಿಯಾಗಿಲ್ಲವೆಂದು ನಾವು ಸಂಶಯವನ್ನು ತೋರಿಸಿದರೂ ನಮ್ಮ ಹೇಳಿಕೆಯನ್ನು ಕೇಳಿಕೊಳ್ಳಲು ಕೂಡ ಅವರು ಸಿದ್ಧರಾಗಿಲ್ಲ. ಇವೇ ಸಾಲಗಳನ್ನು ಬ್ರಿಟಿಶರು ತಮಗೆ ತಾವೇ ಹಿಂದುಸ್ತಾನದ ಕಂದಾಯದಿಂದ, ಹಿಂದೀ ಜನತೆಗೆ ಹೇಳದೆ ಕೇಳದೆ, ಸಲ್ಲಿಸಿಕೊಂಡಿದ್ದಾರೆ.

ಆಗಂತುಕ ಕಾರಣಗಳಿಂದ ಏನೋ ಹಿಂದುಸ್ತಾನವಿಂದು ಸಾವುಕಾರ ದೇಶವಾಗಿದೆ. ಅದಕ್ಕೆ ಇಂದು ಬರಬೇಕಾಗಿರುವ ಸಾಲ ಸ್ವೇಚ್ಛೆಯಿಂದ ಬ್ರಿಟನ್ನಿಗೆ ಯುದ್ಧ ಸಾಮಗ್ರಿಗಳನ್ನೊದಗಿಸಿದ್ದರಿಂದ ಕೂಡಿಬಿದ್ದದ್ದಲ್ಲ. ಬೇಕೆನಿಸಿದ್ದನ್ನೆಲ್ಲ ಹಿಂದುಸ್ತಾನದ ಬ್ರಿಟಿಶ ಸರಕಾರ ತೆಗೆದುಕೊಂಡಿತು. ಬದಲಿಗೆ ಕಾಗದದ ನೋಟುಗಳನ್ನು ಹಂಚಲಾಯಿತು. ಇದರಿಂದ ದೇಶದಲ್ಲಿ ಆರ್ಥಿಕ ಸಂಘಟನೆ ತಲೆಕೆಳಗಾಯಿತು. ಜನರಿಗೆ ಹೇಳಬಾರದ ಯಾತನೆಗಳನ್ನು ಅನುಭವಿಸಬೇಕಾಗಿ ಬಂತು. ಕಟ್ಟಕಡೆಗೆ, ಬಂಗಾಲದ ಬರಗಾಲ ಮಾತ್ರವಲ್ಲ ಅದರಿಂದೀಚೆಗೆ ಪದೇಪದೇ ಒದಗುತಿರುವ ಬರಗಾಲಗಳಿಗೂ ಆರ್ಥಿಕ ಕಟ್ಟಡದ ಈ ವಿಘಟನೆಯೇ ಮೂಲವಾಗಿದೆಯೆಂದು ತೋರಿಸಿ ಕೊಡಬಹುದು. ಹಿಂದುಸ್ತಾನದ ಬಡವರು ದೈಹಿಕ ಯಾತನೆಗೊಳಗಾದುದು ಮಾತ್ರವಲ್ಲ, ಲಕ್ಷಾಂತರ ಸಂಖ್ಯೆಯಲ್ಲಿ ಜೀವ ಕಳೆದುಕೊಂಡರು. ಆದುದರಿಂದ ಸಾಲವನ್ನು ಸೂಟು ಬಿಡಬೇಕೆಂಬ ಬ್ರಿಟನ್ನಿನ ಬೇಡಿಕೆ ಯೋಗ್ಯವಿಲ್ಲೆಂಬುದು ಸ್ಪಷ್ಟವಾಗುವದು.

ಬಲಾಢ್ಯನಾದ ಸಾಲಗಾರನು ತನ್ನ ಹೊಣೆಯಿಂದ ತಪ್ಪಿಸಿಕೊಳ್ಳಲು ಇಚ್ಛಿಸಿದರೆ ಸಾಲಿಗ ಸಾಲಗಾರರ ನಡುವೆ ಅಸಂತುಷ್ಟಿ, ದ್ವೇಷ, ವೈಮನಸ್ಸುಗಳುತ್ಪನ್ನವಾಗದಂತೆ ತಡೆಯುವದು ಅಸಾಧ್ಯ. ಭೂಮಂಡಲ ವ್ಯಾಪಿ ಯುದ್ಧಗಳು ಹುಟ್ಟುವದು ಇಂಥ ಬೀಜಗಳಿಂದಲೆ. ಬಲಿಷ್ಠರು ತಮ್ಮ ಶಕ್ತಿಯನ್ನು ನ್ಯಾಯದ ಗಂಟಲು ಮುರಿಯಲುಪಯೋಗಿಸದಂತೆ ಮಾಡಲು ನಮಗೆ ಇಚ್ಛೆ ಇದ್ದರೆ ಇಂಥ ವಿಷಯಗಳನ್ನು ತೀರ್ಮಾನಿಸಲು ಅಂತರ್‌ರಾಷ್ಟ್ರೀಯ ನ್ಯಾಯಮಂಡಲವೊಂದಿರಬೇಕು. ಈ ಮತ್ತು ಇಂಥ ಬೇರೆ ಪ್ರಶ್ನೆಗಳನ್ನು ತೀರ್ಮಾನಿಸಲು ಅಂಥ ಒಂದು ಸಂಸ್ಥೆಯನ್ನು ಸ್ಥಾಪಿಸಿ ಸಾಲಗಾರನು ತಾನೇ ನ್ಯಾಯಾಧೀಶನ ಮತ್ತು ಪಂಚಮಂಡಲದ ಪಾತ್ರವನ್ನು ವಹಿಸಿಕೊಳ್ಳದಂತೆ ಮಾಡಲು ಯುಕ್ತರಾಷ್ಟ್ರಸಂಘಕ್ಕೆ ಸಾಧ್ಯವುಂಟೆ?

# ಕಥಾ ಕಾಲಕ್ಷೇಪ

[ ವಿ. ಜಿ. ಡಿ. ಸಂಗ್ರಹಿಸಿದ್ದು ]

೧

ಪರಿಗಿ ಹಣ್ಣೆಂದರೆ ಸ್ಟ್ಯಾನಿಯಾರ್ಡನೊಬ್ಬನಿಗೆ ತುಂಬ ಪ್ರೀತಿ. ಅದಕ್ಕಾಗಿ ಅದನ್ನು ತಿನ್ನುವಾಗಲೆಲ್ಲ ಅವನು ದಪ್ಪ ಕನ್ನಡಕಗಳನ್ನು ಹಾಕಿಕೊಂಡು ಆ ಹಣ್ಣು ದೊಡ್ಡದಾಗಿಯೂ ಸುಂದರವಾಗಿಯೂ ಕಾಣುವಂತೆ ಮಾಡಿಕೊಳ್ಳುತಿದ್ದನು. ನಾನಾದರೂ ನನ್ನ ಎಲ್ಲ ಬಗೆಯ ಸಂತೋಷಗಳ ವಿಷಯದಲ್ಲಿ ಹೀಗೆಯೆ ಮಾಡುತ್ತೇನೆ. ಆನಂದಗಳನ್ನು ಗುಡ್ಡಗಳಂತೆ ಮಾಡಿ, ಉಪದ್ರವಗಳನ್ನು ನೋಡುವಾಗ ಅವನ್ನು ಚಿಕ್ಕದು ಮಾಡಿ ತೋರಿಸುವ ಕನ್ನಡಕ ಹಾಕಿಕೊಳ್ಳುತ್ತೇನೆ.

--ರಾಬರ್ಟ ಸದೆ (ಕೆರೋಲಿನ್ ಬೌಲ್ಸಳಿಗೆ ಬರೆದ ಪತ್ರದಲ್ಲಿ)

೨

ದೇವದಾರು ಅಡವಿಗಳೊಳಗಿದ್ದ ಹಳ್ಳಿಯೊಂದರ ಶಾಲೆಯಲ್ಲಿ ಅವಳು ಕಲಿಸುತಿದ್ದಳು. ಆ ಶಾಲೆಗ ಬಾಗಿಲುಗಳೂ ಇದ್ದಿಲ್ಲ ಕಿಡಿಕಿಗಳೂ ಇದ್ದಿಲ್ಲ. ಮಕ್ಕಳು ಮೋಪಿನ ತುಂಡುಗಳ ಮೇಲೆ ಕುಳಿತುಕೊಳ್ಳುತ್ತಿದ್ದರು. ಶಿಕ್ಷಕಳಿಗೆ ಕುರ್ಚಿಯೂ ಇದ್ದಿಲ್ಲ. ಚಳಿ ಮಳೆಗಾಳಿಯಿಂದ ರಕ್ಷಿಸುವ ಇಲ್ಲವೆ ಅಗ್ಗಿಷ್ಟಿಗೆಯ ಸೌಕರ್ಯವೂ ಇದ್ದಿಲ್ಲ. ಫೆಬ್ರುವರಿಯಲ್ಲೊಂದು ದಿನ ತೀವ್ರವಾದ ತೀಕ್ಷ್ಣ ಚಳಿಗಾಳಿಯೊಂದು ಆ ಸಂಸ್ಥಾನದಲ್ಲಿ ಬಿರುಸಾಗಿ ಬೀಸಿತು. ಕ್ಷಣಕಾಲವೂ ಹಿಂದೆ ಮುಂದೆ ನೋಡದೆ ಅವಳು ಮಕ್ಕಳನ್ನು ಕ್ರೂರವಾದ ಚಳಿಯಿಂದ ಮರೆಮಾಡುವ ಸಲುವಾಗಿ ತೆರೆಬಾಗಿಲಿಗೆ ಅಡ್ಡವಾಗಿ ಹುಡುಗರ ಕಡೆ ಮುಖ, ಚಳಿ ಹವೆಗೆ ಬೆನ್ನು ಹಾಕಿ ನಿಂತುಕೊಂಡಳು. ಆದರೆ ತನ್ನ ಪ್ರೇಮಕ್ಕೆ ಅವಳು ಪ್ರಾಣದ ಬೆಲೆ ತರಬೇಕಾಯಿತು. ಅವಳಿಗೆ ನ್ಯುಮೋನಿಯಾ ಜ್ವರ ಬಂದು ಒಂದು ವಾರದೊಳಗೆ ತೀರಿಕೊಂಡಳು. ಅವಳನ್ನು ಪ್ರೀತಿಸುತ್ತಿದ್ದವರು, ತಮಗಾಗಿ ಅವಳು ತೋರಿಸಿದ ಮಾನವ ಪ್ರೀತಿಯ ಅಪ್ರತಿಮ ಪ್ರದರ್ಶನವನ್ನು ನೆನೆದು, ಅವಳನ್ನು ಗುಲಾಬಿ ಹೂಗಳ ರಾಶಿಯಲ್ಲಿ ಚಿರವು ವಿಶ್ರಾಂತಿ ಸ್ಥಾನದಲ್ಲಿ ಮಲಗಿಸಿದರು.

—ಮಾರ್ಟಿನ್ ಬ್ರುಂಬಂಗ (The Making of a Teacher ಪುಸ್ತಕದಲ್ಲಿ)

# ಕುಡುಕರೂ ಮೋಟಾರುಗಳೂ

ಹಳೆಯ ಪಾಷಾಣ ಪ್ರಣಾವಸ್ಥೆಯ ಮಿತಿ ಮೋಟಾರು ನಡೆಸುವವರಿಗೆ ಎಷ್ಟೋ ಕಾಲದು. ಮೋಟಾರು ವಾಹನವೆಂಬುದು ಬಹಳ ಅಪಾಯಕರವಾದುದು. ರೇಲು ಮಾರ್ಗದಗುಂಟ ಇಂಜಿನ್ನು ನಡೆಸುವವರ ಉಪಯೋಗಾರ್ಥವಾಗಿ ಗಡಂಗುಗಳನ್ನಿಡಲು ಯಾರಾದರೂ ಅನುಮತಿ ಕೊಡಬಹುದೆ? ಇಂಜಿನ್ನು ನಡೆಸತೊಡಗುವ ಮೊದಲು ರೇಲ್ವೇ ಡ್ರಾಯವರನು ಕುಡಿದದ್ದು ತಿಳಿದು ಬಂದರೆ ಅವನನ್ನು ದಂಡಿಸುತ್ತಾರೆ. ಎರಡನೇ ಬಾರಿ ಅತ ಅಂಥದೇ ತಪ್ಪು ಮಾಡಿದ್ದು ಕಂಡು ಬಂದರೆ ಅವನನ್ನು ತೀವ್ರ ದಂಡನೆಗೊಳಪಡಿಸುತ್ತಾರೆ. ಹೀಗಿದ್ದರೂ ರೇಲ್ವೆಗಳಲ್ಲಿಯೂ ರಸ್ತೆಗಳಲ್ಲಿಯೂ ಆಗಬಹುದಾದ ಅಪಘಾತಗಳ ಸಂಭವವನ್ನು ಹೋಲಿಸಿದರೆ ತಾರತಮ್ಯ ಅಗಾಧವಾಗಿರುವದು ಕಂಡುಬಂದೀತು. ರೇಲ್ವೆ ಗಾಡಿಗಳು ಹಳಿಗಳ ಮೇಲೆಯೆ ಚಲಿಸುತ್ತವೆ. ಅವುಗಳ ನಿಯಂತ್ರಣ ಸಂಕೇತಗಳಿಂದ (ಸಿಗ್ನಲ್) ಆಗುತ್ತದೆ. ಆದರೆ ಮೋಟಾರು ಬೇಕುಬೇಕಾದ ದಿಕ್ಕಿನಲ್ಲಿ ಚಲಿಸಬಲ್ಲದು. ಮತ್ತು ಪಟ್ಟಣದ ಕವಲುದಾರಿಗಳಲ್ಲಿ ಮಾತ್ರ ಸಂಕೇತಗಳಿಂದ ಅವುಗಳನ್ನು ನಿಯಂತ್ರಿಸುತ್ತಾರೆ. ರೇಲ್ವೆಗಳು ಪ್ರಾರಂಭವಾದಂದಿನಿಂದ ಇಂದಿನ ವರೆಗೆ ಗ್ರೇಟ್ ಬ್ರಿಟನ್ ಮತ್ತು ಅಯರ್ಲಂಡದಲ್ಲಿ ಸೇರಿ ಎಲ್ಲ ರೇಲ್ವೆಗಳು ಕೊಂದದ್ದಕ್ಕಿಂತ ಹೆಚ್ಚು ಜನರನ್ನು ಮೋಟಾರು ನಡೆಸುವವರು ಒಂದೇ ವರ್ಷದಲ್ಲಿ ಕೊಲ್ಲುತ್ತಾರೆ. ಈ ಸಮಸ್ಯೆಗೆ ಕುಡುಕುತನ ಎಷ್ಟು ಮಟ್ಟಿಗೆ ಕಾರಣವಾಗಿದೆಂಬುದನ್ನು ಮಾರ್ಗನೀತಿ (High way Code) ಯಲ್ಲಿಯೂ ಬ್ರಿಟಿಶ ವೈದ್ಯ ಸಂಘದವರು ನೇಮಿಸಿದ ಸಮಿತಿಯ ವರದಿಯಲ್ಲಿಯೂ ಕಾಣಬಹುದು. ಸ್ವೀಡನ್ನಿನಲ್ಲಿರುವ ಲಂಡ್ ವಿಶ್ವವಿದ್ಯಾಲಯದ ಪ್ರೊ. ವಿಡ್ಮಾರ್ಕರು ಅದನ್ನು ಅಳೆಯಲು ರಕ್ತಪರೀಕ್ಷೆಯೊಂದೇ ಉಪಾಯವೆಂದು ತೋರಿಸಿಕೊಟ್ಟಿದ್ದಾರೆ...... ಒಬ್ಬನ ರಕ್ತದಲ್ಲಿ ಎಷ್ಟು ಅಂಶ ಮದ್ಯ ಸೇರುವದೋ ಅಷ್ಟು ಅಂಶ ಅವನಿಗೆ ಅಮಲೇರುತ್ತದೆ. ಒಬ್ಬ ಮನುಷ್ಯನ ರಕ್ತದಲ್ಲಿ ೧೦೦೦ಕ್ಕೊಂದರಷ್ಟು ಮದ್ಯ ಸೇರಿದ್ದರೂ ಅವನು ಮೋಟಾರು ಓಡಿಸುವಾಗ ಸಾರ್ವಜನಿಕರಿಗೆ ಗಂಡಾಂತರ ಪ್ರಾಯನಾಗುವನೆಂದು ಪ್ರೊ. ವಿಡ್ಮಾರ್ಕರು ಕಂಡು ಹಿಡಿದಿದ್ದಾರೆ. ಮೋಟಾರಿಗನನ್ನು ಸಾರ್ವಜನಿಕ ಗಂಡಾಂತರವನ್ನಾಗಿ ಮಾಡಲು ಎಷ್ಟು ಕಡಿಮೆ ಮಾದಕ ದ್ರವ್ಯ ಸಾಲುವದೆಂಬುದು ಗಮನಾರ್ಹವಾಗಿದೆ. ಪ್ರೊ. ವಿಡ್ಮಾರ್ಕರ ಈ ಪರೀಕ್ಷಾಮಾನವನ್ನು ಸ್ವೀಡನ್, ನಾರ್ವೆ, ಜರ್ಮನಿ, ಸ್ವಿಟ್ಝರ್ಲಂಡ್, ಅಮೇರಿಕಾ ಮತ್ತು ಇಂಗ್ಲಂಡಿನ ನ್ಯಾಯಸ್ಥಾನಗಳು ಅಂಗೀಕರಿಸಿವೆ. ನಾರ್ವೆಯಲ್ಲಿಂತೂ ಮದ್ಯಸೇವಿಸಿದ ೮ ತಾಸುಗಳ ವರೆಗೆ ಯಾರನ್ನೂ ಮೋಟಾರು ನಡೆಸಗೊಡುವದಿಲ್ಲ.

# ಹೆಂಡದ ಲಾಭ

ಹೆಂಡ ಕುಡಿಯುವದರಿಂದ ಕರದ ರೂಪದಲ್ಲಿ ದೊಡ್ಡ ಪ್ರಮಾಣದಲ್ಲಿ ಲಾಭವಾಗುವದೆಂದು ವಾದಿಸುವವರಿಗೆ ಕೊಡಬಹುದಾದ ಮುಖ್ಯ ಉತ್ತರವಿದು—ಕುಡುಕರು ಗಡಂಗಗಳಿಂದ ಹೊರಬಿದ್ದ ನಂತರ ಅವರ ಕುಡಿತದ ಪರಿಣಾಮವಾಗಿ ಒದಗುವ ಅನೇಕ ಉಪದ್ರವಗಳ ಬೆಲೆಯನ್ನು ಸಾರ್ವಜನಿಕರೇ ತೆರಬೇಕಾಗುವದು. ಅವರ ಕಾರ್ಯಕ್ಷಮತೆ ಕುಂದುವದು, ಅಪಘಾತಗಳಾಗುವವು, ಅದಕ್ಕೆ ಆಸ್ಪತ್ರೆಗಳು ಬೇಕಾಗುವವು, ಬಡವರಿಗೆ ಸಾರ್ವಜನಿಕ ಸಹಾಯ ನೀಡಬೇಕಾಗುವದು, ಕುಡುಕರ ಕೆಲಸದ ತಾಸುಗಳು ವ್ಯರ್ಥ ಹಾಳಾಗುವವು, ರೋಗ ರುಜಿಗಳಿಂದ ಸಮಾಜದ ಮೇಲೆ ದುಷ್ಪರಿಣಾಮವಾಗುವದು. (ಮೇಹ ರೋಗಗಳು ಹೆಚ್ಚುವದನ್ನು ಗಮನಿಸಿರಿ), ನ್ಯಾಯಸ್ಥಾನಗಳೂ ಸೆರೆಮನೆಗಳೂ ಹುಚ್ಚರ ಆಸ್ಪತ್ರೆಗಳೂ ಬೇಕಾಗುವವು. ಇವೆಲ್ಲದರ ವೆಚ್ಚವನ್ನು ಅಥವಾ ಹಾನಿಯನ್ನು ಸಮಾಜವೇ ತುಂಬಬೇಕಾಗುವದು.

—ಡಾ. ಕೆ. ಎಫ್. ರಾಟ್ರೆ

[ಕೆಂಬ್ರಿಜ ಪಾನಸಂಯಮ ಮಂಡಲದವರು ಪ್ರಕಟಿಸಿದ ,,ಮದ್ಯಪಾನ" ಪುಸ್ತಕದಿಂದಾಯ್ದುದು]

# ಅಹಿಂಸೆ—ಜೀವನದ ವಸ್ತುಸ್ಥಿತಿ

(ಮೊ. ಕ. ಗಾಂಧಿ)

ಪ್ರಶ್ನೆ: ೧ ನಿಮ್ಮ ಅಹಿಂಸೋಪದೇಶದ ಪರಿಣಾಮವಾಗಿ ಹಿಂದೂಗಳು ಶಿಥಿಲರಾಗಿ ಮುಸ್ಲಿಂ ಲೀಗಿನ ಅನುಯಾಯಿಗಳ ಕೈಯಲ್ಲಿ ಕೊಲೆಗೀಡಾಗಬೇಕಾಗಬಹುದು, ಕೊನೆಯದಾಗಿ ಮುಸ್ಲಿಮರನ್ನು ಸಶಸ್ತ್ರರಾಗಿ ಮಾಡಲಾಗುತಿದೆಯೆಂಬ ಸುದ್ದಿ ಹಬ್ಬಿರುವದರಿಂದ ಈ ಸಂಶಯವು ಸರ್ವಸಾಮಾನ್ಯವಾಗಿ ಪ್ರಚಲಿತವಾಗಿದೆ.

ಉತ್ತರ: ೧ ಈ ಆರೋಪದಲ್ಲಿ ಗಂಭೀರವಾದುದು ನಿಜವಾಗಿದ್ದಲ್ಲಿ ಇದು ಪ್ರಾಂತಿಕ ಸರಕಾರಗಳ ಮೇಲೆ ಘನವಾದ ಅಪವಾದವೇ ಸರಿ. ಹೇಗೆ ಇರಲಿ, ಹಿಂದೂಗಳು ಧೀರರಾದ ಅಯುಧಶಕ್ತಿಯಿಂದ ಪ್ರಬಲರಾದ ನನ್ನ ಅಹಿಂಸೋಪದೇಶದ ಪರಿಣಾಮವಾಗಿ ಶಿಥಿಲರಾಗಿದ್ದರೆ ಎಷ್ಟು ಒಳಿತಾಗುತ್ತಿತ್ತು! ಯಾವನೇ ಗುರುವಿನ ಉಪದೇಶಗಳು ವಿಕೃತಗೊಳಿಸಲ್ಪಟ್ಟರೆ ಅದಕ್ಕೆ ಅವನನ್ನು ದೂರುವದು ಸರಿಯೆ? ವೇದಾಂಗಳ ಸಿದ್ಧಾಂತಗಳನ್ನು ಕೂಡ ಅನೇಕ ವಿದ್ಯಾರ್ಥಿಗಳು ವಿಕೃತಗೊಳಿಸುವದನ್ನು ನಾವು ನೋಡಿಲ್ಲವೆ? ಇಲ್ಲಿ ಶಿಕ್ಷಕರು ಹೊಣೆಯೆ? ನನ್ನನ್ನು ಒಳಗಾದರೆ ಅಹಿಂಸೆಯ ಅಪ್ರಬುದ್ಧ ಉಪದೇಶಕನೆಂದು ಟೀಕಿಸಬಹುದು. ಹಾಗಿದ್ದರೆ ನನ್ನ ಉತ್ತರಾಧಿಕಾರಿಯಾದರೂ ನನಗಿಂತ ಸಮರ್ಥನೂ ಯೋಗ್ಯನೂ ಆಗಲೆಂದು ದೇವರನ್ನು ಬೇಡೋಣ.

ಪ್ರಶ್ನೆ: ೨ ಬ್ರಿಟಿಶರು ಹಿಂದುಸ್ತಾನದಿಂದ ಹೊರಟುಹೋದ ಮೇಲೆ ದೇಶದಲ್ಲಿ ಅನಾಯಕತೆ ಅವ್ಯವಸ್ಥೆಗಳು ಹಬ್ಬುವ ಸಂಭವವುಂಟು. ಅದರಿಂದ ರಾಷ್ಟ್ರೀಯವಾದಿಗಳು ಒಡನೆಯೆ ಅಗ್ನಿಶಸ್ತ್ರಗಳಿಂದ ಆತ್ಮರಕ್ಷಣೆ ಮಾಡಿಕೊಳ್ಳುವದನ್ನು ಕಲಿಯತೊಡಗದೆ ಹೋದರೆ, ಹೋರಾಡುವದೊಂದರಲ್ಲೇ ವಿಶ್ವಾಸವುಳ್ಳ ಮುಸ್ಲಿಂಲೀಗ್ ಅನುಯಾಯಿಗಳ ಕಾಲಕೆಳಗೆ ಸಿಕ್ಕಿ ಅವರು ಕಷ್ಟಪಡಬೇಕಾದೀತಷ್ಟೇ ಅಲ್ಲ ಕೊನೆಗೆ ಅವರ ಪಾದಾಕ್ರಾಂತರಾಗಬೇಕಾದೀತೆಂಬ ಭಯವುಂಟಾಗಿದೆ. ಪಾಕಿಸ್ತಾನ ಬರಲಿ, ಬಾರದಿರಲಿ, ಈ ಉಪದ್ರವ ಬಂದೇ ತೀರುವದು. ಏಕೆಂದರೆ ಇದರ ಹಿಂದೆ ಬ್ರಿಟಿಶ ಸಾಮ್ರಾಜ್ಯವಾದದ ಗುಪ್ತ ಕೈವಾಡವಿದೆ. ಇಂಥ ರಾಜಕೀಯ ಪರಿಸ್ಥಿತಿ ದೇಶವನ್ನು ಆಕ್ರಮಿಸಬಹುದೆಂಬ ವಿಶಾಲ ಸಂಭಾವ್ಯತೆಯನ್ನು ಗಮನಿಸಿ ವೈಯಕ್ತಿಕ ಆತ್ಮರಕ್ಷಣೆಗಾಗಿಯಾದರೂ ನಿಮ್ಮ ಅಹಿಂಸಾತತ್ವವನ್ನು ಸಡಿಲಿಸಲಾರಿರಾ?

ಉತ್ತರ ೨: ನೀವು ಕಲ್ಪಿಸಿಕೊಂಡಂತೆ ಮುಸ್ಲಿಂಲೀಗಿಗೆ ಭಯಪಡುವ ರಾಷ್ಟ್ರೀಯರು ಆ ಘನವಾದ ಹೆಸರಿಗೆ ಅರ್ಹರಲ್ಲ. ರಾಷ್ಟ್ರೀಯರು. ತಮ್ಮ ಕ್ರಿಯಾ ಕ್ಷೇತ್ರದಿಂದ ಮುಸ್ಲಿಂಲೀಗ್ ಅನುಯಾಯಿಗಳನ್ನು ಹೊರಗಿರಿಸಬಲ್ಲರೆ? ಮತಗಳಿಗೆ ಗಾಳ ಹಾಕುವ ಸಾಧನಗಳನ್ನು ನಾನು ಭಾವಿಸುತ್ತಿಲ್ಲ. ಮುಸ್ಲಿಂರೂ ಇತರರಂತೆ ಹಿಂದೀಯರು ಮತ್ತು ಅದರಿಂದ ರಾಷ್ಟ್ರೀಯರ ಅಕ್ಕರೆಗೆ ಸಿಗುವದವಶ್ಯ ಎಂಬ ಭಾವನೆಯಿಂದ ನಾನು ಹೇಳುತಿದ್ದೇನೆ. ಮುಂದಾಳುಗಳಿಗೀಗ ಅಹಿಂಸೆಯಲ್ಲಿ ವಿಶ್ವಾಸವಿಲ್ಲದಿದ್ದರೆ ಅವರು ಧೈರ್ಯದಿಂದ ಮುಚ್ಚುಮರೆಯಿಲ್ಲದೆ ಹಾಗೆ ಹೇಳಿ ಆ ಪ್ರಕಾರ ತಮ್ಮ ನೀತಿಯನ್ನು ಬದಲಿಸಲಿ. ನನ್ನ ಪಾಲಿಗೆ ಬದಲಾವಣೆಗೆಡೆಯೇ ಇಲ್ಲ. ನನ್ನ ಪಾಲಿಗೆ ಅಹಿಂಸೆ ಬರಿ ಸಿದ್ಧಾಂತವಲ್ಲ, ಅನುಭವ ಜ್ಞಾನದಿಂದ ಸಿದ್ಧವಾದ ಜೀವನದ ವಸ್ತುಸ್ಥಿತಿ. ಕಬ್ಬಿಣ ತಿಂದುತಿಂದು ಜಾರಿದಾರಿಗೂ ಸವಿಯಾಗಿದೆಯೆಂದು ಮನಗಂಡವನು ಅದು ಕಹಿಯಾಗಿದೆಯೆಂದು ಹೇಳಲು ಹೇಗೆ ತಾನೆ ಒಡಂಬಟ್ಟಾನು? ಅದು ಕಹಿಯಾದೆಯೆಂದು ಹೇಳುವವರು ಕಬ್ಬನ್ನು ತಿಂದಿಲ್ಲ, ಅವರಂತಿರುವ ಬೇರೇನನ್ನೋ ತಿಂದಿರಬೇಕು. ಸಾಮ್ರಾಜ್ಯವಾದಿಗಳ ಗುಪ್ತ ಅಥವಾ ಬಹಿರಂಗ ಕೈವಾಡಕ್ಕೆ—ಅದು ಇದೆಯೆಂದು ವಾದಕ್ಕಾಗಿ ಒಪ್ಪಿದರೂ—ಅಹಿಂಸೆ ಹೆದರಬೇಕಿಲ್ಲ.

ಲಂಡನದಲ್ಲಿ ಈಚೆಗೆ ಪ್ರಕಟವಾದ "ವಿಜ್ಞಾನ, ಸಾಹಿತ್ಯ, ಶಾಂತಿ" ಎಂಬ ಪುಸ್ತಕದಲ್ಲಿ ಅಲ್ಡಸ್ ಹಕ್ಸ್ಲೆಯೆಂಬ ಪ್ರಸಿದ್ಧ ತತ್ವಜ್ಞಾನಿಗಳು ಜಗತ್ತಿನ ಇಂದಿನ ತೊಡಕುಗಳ ಪ್ರತಿಕ್ರಿಯೆಯಾಗಿ ಸತ್ಯಾಗ್ರಹಕ್ಕೆ ಮಹತ್ವ ಕೊಟ್ಟಿದ್ದಾರೆ. ಮುಂದಿನ ಕಾಲದಲ್ಲಿ ಸತ್ಯಾಗ್ರಹವೊಂದೇ ಸಾಧ್ಯವಾದ ರಾಜಕೀಯ ಕ್ರಾಂತಿಸಾಧನವೆಂದು ಅವರು ಹೇಳಿದ್ದು ಟ್ಯಾಂಕ ಮೊದಲಾದ ಭಯಂಕರ ಆಯುಧಗಳೆಲ್ಲ ಆಳುವ ಅಲ್ಪಸಂಖ್ಯಾಕರ ಕೈಸೇರಿರುವದರಿಂದ ಅನ್ಯ ಹಿಂಸಾತ್ಮಕ ಕ್ರಾಂತಿ ಅಸಾಧ್ಯವಾಗುವದೆಂದು ತೋರಿಸಿಕೊಟ್ಟಿದ್ದಾರೆ.

# ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣ

### (ಸೋದೆಪುರ ಆಶ್ರಮದಲ್ಲಿ)

೯—೫—೪೭

ತಮಗೆ ಕಲ್ಕತ್ತೆಗೆ ತೆರಳುವ ಇಚ್ಛೆಯಿದ್ದಿಲ್ಲ, ಆದರೆ ಅಲ್ಲಿಯ ಶುದ್ಧಿಯನ್ನು ಗೆಳೆಯರ ಮೂಲಕ ಕೇಳಿದೊಡನೆ ನೌಖಾಲಿ ಮತ್ತು ಬಿಹಾರಗಳಲ್ಲಿ ಸಾಧಿಸಿದ ಉದ್ದೇಶವನ್ನು ಅಲ್ಲಿಯೂ ಸಾಧಿಸಲು ಅಲ್ಲಿಗೆ ಹೋಗತಕ್ಕದ್ದೆಂದು ನಿಶ್ಚಯಿಸಿದೆನೆಂದು ಗಾಂಧೀಜಿಯವರು ಹೇಳಿದರು.

ವೈಶಾಖದ ೨೫ ನೆಯ ದಿನವು ಗುರುದೇವನ ಹುಟ್ಟುಹಬ್ಬದ ದಿನವಾಗಿತ್ತು. ಆದುದರಿಂದ ಆತನ ಭಾವಚಿತ್ರವು ಪುಷ್ಪ ಮಾಲಿಕೆಗಳಿಂದ ಅಲಂಕೃತವಾದುದನ್ನು ಎಲ್ಲರೂ ಕಂಡರು. ಅದರಿಂದಲೆ ಗುರುದೇವ ಬರೆದ ಎರಡು ಗೀತಗಳನ್ನು ಅವರೆದುರಿಗೆ ಹಾಡಲಾಗಿತ್ತು. ಮಹಾತ್ಮರು ಎಂದೂ ಸತ್ತಿಲ್ಲ, ಅವರು ಪ್ರಾರಂಭಿಸಿದ ಕಾರ್ಯವನ್ನು ಮುಂದುವರಿಸುತ್ತ ತಮ್ಮನ್ನು ಅಮರರನ್ನಾಗಿಟ್ಟುಕೊಳ್ಳುವುದು ಅವರಿಗೇ ಸಂದದ್ದಾಗಿದೆ: ಹಿಂದು ಮುಸ್ಲಿಮರು ಯುದ್ಧ ಮಾಡುತ್ತಿರುವ ಕಾಲದಲ್ಲಿ ಎರಡನೆಯ 'ಹಿಂಸಯಾ ಉನ್ಮತ್ತಾ ಪೃಥಿವೀ' ಎಂಬ ಗೀತವು ಸಮಯೋಚಿತವಾದದ್ದಾಯಿತು. ಕತ್ತಲೆಯಿಂದ ಅವರನ್ನು ದೇವರು ಬೆಳಕಿಗೊಯ್ಯಬೇಕು. ಅಸತ್ಯದಿಂದ ಸತ್ಯಕ್ಕೊಯ್ಯಬೇಕು. ಮತ್ತು ದುಃಖದಿಂದ ಅಮೇಯವಾದ ಆನಂದಕ್ಕೆ ಕರೆದೊಯ್ಯಬೇಕು. ಎಂಬುದೇ ಗೀತದ ಸಾರವಾಗಿತ್ತು. ದಕ್ಷಿಣ ಆಫ್ರಿಕಕ್ಕೆ ತೆರಳಲು ದೀನಬಂಧು ಅಂಡ್ರೂಸರಿಗೂ ಪಿಯರ್ಸನ್ನರಿಗೂ ಅಪ್ಪಣೆಯಿತ್ತಾಗ ಇದೇ ಮಂತ್ರದಿಂದ ಅವರನ್ನು ಗುರುದೇವನು ಸಾಯುಧರನ್ನಾಗಿ ಮಾಡಿದ್ದನು. ಜಗತ್ತಿನಲ್ಲಿರುವ ಗುರುದೇವನ ಅಸಂಖ್ಯಾಕ ಮಹಾಭಕ್ತರಲ್ಲಿ ಇವರಿಬ್ಬರು ಅತಿಶ್ರೇಷ್ಠರಾಗಿದ್ದರು. ತನ್ನನ್ನು ನೋಡಲು ಕಾದಿದ್ದ ಪಠಾಣ ಪ್ರತಿನಿಧಿಗಳಿಗೆ ಇದೇ ಅರ್ಥದ ಮಾತುಗಳನ್ನು ಕಾಯಿದೆಆಝಂ ಜಿನ್ನಾರು ಹೇಳಿದ್ದು ಬಹಳ ಒಳ್ಳೆಯದಾಯಿತು. ಅವರು ತಮಗಾಗಿ ಆ ಮಂತ್ರಗಳನ್ನು ಓದಬೇಕು. ಎಲ್ಲರೂ ಆ ಬುದ್ಧಿವಾದವನ್ನು ಅನುಸರಿಸಿದರೆ ಹಿಂದುಸ್ತಾನವು ಸತ್ಯವಾಗಿ ನಿಜಶಾಂತಿಯ ಅದ್ವಿತೀಯವಾದ ನೆಲೆವೀಡಾದೀತು. ಅವರು ಸಹಿಮಾಡಿದ ಅಹಿಂಸೆಯ ಮಹಾಪತ್ರಕ್ಕೆ ತಾವೂ ಜೊತೆಯ ಸಹಿದಾರನೆಂದು ತಮಗೆ ಗೊತ್ತಿದೆ. ಹಿಂದುಗಳು ಅಥವಾ ಮುಸ್ಲಿಮರು ಪಶುತ್ವಕ್ಕಿಳಿದರೆ, ಆಗ ತಾವು ಆಮರಣಾಂತ ಉಪವಾಸ ಕೈಕೊಳ್ಳುವ ಕರ್ತವ್ಯವನ್ನು ತಮ್ಮ ಕೊರಳಿಗೆ ಕಟ್ಟೀತು. ಬಿಹಾರದ ಹಿಂದುಗಳೂ ನೌಖಾಲಿಯ ಮುಸ್ಲಿಮರೂ ಆ ಮಾತನ್ನು ನೆನಪಿನಲ್ಲಿಡಲಿ, ಎಂದರು.

ಅವರು ಮುಂದುವರಿಸಿದರು: ಹಿಂದುಸ್ತಾನದ ಮುಸಲ್ಮಾನರ ಸಲುವಾಗಿ ತಾವು ಮಾಡಿದ ಮತ್ತು ಮಾಡುತ್ತಿರುವ ಸೇವೆಯಿಂದ ತಾವು ಉಪವಾಸ ಮಾಡುವ ಹಕ್ಕನ್ನು ಪಡೆದಿದ್ದಾಗಿದೆ. ಪರಸ್ಪರರನ್ನು ದ್ವೇಷಿಸಬೇಕೆಂದು ಯಾವ ಸತ್ಯವಾದ ಧರ್ಮವೂ ಮನುಷ್ಯರಿಗೆ ಕಲಿಸುವುದಿಲ್ಲವೆಂದು ಇಕ್ಬಲ್ ಕವಿಯು ಜನರಿಗೆ ಆಗಲೇ ಹೇಳಿಕೊಟ್ಟಿದ್ದಾನೆ. ಅವರೆಲ್ಲರೂ ಆ ಪಾಠವನ್ನು ಮನನಮಾಡಿಕೊಂಡು ಮಾನವ ಪ್ರಪಂಚದಲ್ಲಿ ಹಿಂದುಸ್ತಾನವು ಒಂದು ಭ್ರಾತೃಭಾವದ ಮತ್ತು ಶಾಂತಿಯ ತವರೂರಾಗುವಂತೆ ಮಾಡಲಿ!

ಬ್ರಿಟಿಶರು ಹಿಂದುಸ್ತಾನವನ್ನು ಬಿಡುವುದು ಖಂಡಿತ. ನಮ್ಮಲ್ಲೇನಾದರೂ ವೈಷಮ್ಯಗಳಿದ್ದರೆ ಅವುಗಳನ್ನು ಸಂಪೂರ್ಣವಾಗಿ ನಮ್ಮ ನಮ್ಮೊಳಗಿನದನ್ನಾಗಿಮಾಡಿಕೊಳ್ಳಬೇಕಲ್ಲದೆ ಅವುಗಳ ತೀರ್ಪಿಗಾಗಿ ಬ್ರಿಟಿಶರಿಗೆ ಶರಣಾಗಬಾರದು; ಏಕೆಂದರೆ ಅಷ್ಟು ಬೇಗ ಭಾರತವನ್ನು ಬಿಡುವುದಕ್ಕಿಂತ ಬೇರೆಯಾದ ಯಾವ ಕರ್ತವ್ಯವೂ ಅವರಿಗಿಲ್ಲ. ಅವರು ತಮ್ಮ ಕರ್ತವ್ಯದ ಆ ಭಾಗವನ್ನು ಪೂರೈಸಿದರೆಂದರೆ ಉಳಿದದ್ದೆಲ್ಲವನ್ನೂ ಅಣ್ಣತಮ್ಮಂದಿರಂತೆ ನಾವು ಬಗೆಹರಿಸಿಕೊಳ್ಳಬಲ್ಲೆವು.

೧೦—೫—೪೭

ತಮಗೆ ಕೇಳಲಾದ ಎರಡು ಪ್ರಶ್ನೆಗಳನ್ನು ಗಾಂಧೀಜಿಯವರು ಮುಂದಿಟ್ಟುಕೊಂಡರು. ದಿನೇ ದಿನೇ ಬೆಳೆಯುತ್ತಿರುವ ಹಿಂದು ಮುಸ್ಲಿಂ ದ್ವೇಷ ಭಾವವನ್ನು ಗಮನಿಸಿದರೆ ಅವರಿಬ್ಬರೂ ಮಿತ್ರರಾಗಲು ಸಾಧ್ಯವೆ? ಎಂಬ ಪ್ರಶ್ನೆಗೆ ಅವರು ಆ ಶತ್ರುತ್ವವು ಶಾಶ್ವತವಾಗಿ ಉಳಿಯಲಾರದೆಂದು ಖಂಡಿತೋಕ್ತಿಯಿಂದ ಉತ್ತರವಿತ್ತರು.

'ಹಿಂದು—ಮುಸ್ಲಿಮರು ಅಣ್ಣತಮ್ಮಂದಿರಾದದ್ದರಿಂದ ತಾತ್ಕಾಲಿಕ ಜಗಳವನ್ನು ಮೀರಿ ಅವರಿಬ್ಬರು ಹಾಗೇ ಉಳಿಯಬೇಕು. ಕಲಹವು ಕೇವಲ ಎರಡು ವ್ಯಕ್ತಿಗಳ ನಡುವೆಯಲ್ಲವಾದುದರಿಂದ ಜಾತಿಗಳಲ್ಲಿ ಶಾಶ್ವತ ಕಲಹವೇನೂ ಅಸಂಭಾವ್ಯವಲ್ಲ. ಹಾಗಾಗಲಾರದೆಂದು ನನ್ನ ನಂಬಿಗೆ; ಏಕೆಂದರೆ, ಹಾಗೇನಾದರೂ ಆದರೆ ನಾವು ಆ ಎರಡು ಧರ್ಮಗಳನ್ನು ಹಿಂದುಸ್ತಾನದಲ್ಲಿ ಹೂತು ಹಾಕಿ ತಮ್ಮ ಸ್ವಾತಂತ್ರ್ಯವನ್ನು, ಒಂದು ಮುಷ್ಟಿ ಕೋವೆಗೆ ಮಾರುವವರಾದೇವು.'

ಬಂಗಾಲ ವಿಭಜನೆಗೆ ಹಿಂದುಗಳ ಅನುಕೂಲಾಭಿಪ್ರಾಯ ಬಲಿಯುತ್ತಿರುವಾಗ ಅದನ್ನು ತಪ್ಪಿಸಲು ಸಾಧ್ಯವೇ? ಎಂಬುದು ಎರಡನೆಯ ಪ್ರಶ್ನೆಯಾಗಿತ್ತು. ಗಾಂಧೀಜಿಯವರು ಆ ಅಭಿಪ್ರಾಯದ ಶಕ್ತಿಯನ್ನು ಗುರುತಿಸಿದ್ದೇನೆಂದರು. ಆ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೊಡಲಾಗದಿದ್ದರೂ ಬಹುಸಂಖ್ಯಾಕರಾದ ಮುಸ್ಲಿಮರು—ಅದರಲ್ಲೂ ಅಧಿಕಾರಾರೂಢವಾದ ಮುಸ್ಲಿಮ ಸರಕಾರವು—ನಾಳೆ ಬಂಗಾಲವು ವಿಭಕ್ತವಾದರೆ ಅದಕ್ಕೆ ಹೊಣೆಯೆಂದು ಅವ್ಯಾಹತವಾಗಿ ಹೇಳಬಹುದು ಎಂದರು. 'ನಾನು ಬಂಗಾಲದ ಮುಖ್ಯಮಂತ್ರಿಯಾಗಿದ್ದರೆ ನನ್ನ ಹಿಂದು ಸಹೋದರರೊಡನೆ ಹಿಂದಿನದನ್ನು ಮರೆತುಬಿಡಬೇಕೆಂದು ಬೇಡಿಕೊಳ್ಳುತ್ತಿದ್ದೆ. ನಿಮ್ಮಷ್ಟೇ ನಾನೂ ಬಂಗಾಲಿಯೆಂದು ಅವರಿಗೆ ನಾನು ಹೇಳುತ್ತಿದ್ದೆ. ಧರ್ಮದ ಭೇದವು ಇಬ್ಬರನ್ನೂ ಬೇರೆಯಾಗಿಸಲಾರದು. ನಾವೂ ನೀವೂ ಒಂದೇ ಭಾಷೆಯನ್ನು ಬಳಸುತ್ತೇವೆ, ಒಂದೇ ಸಂಸ್ಕೃತಿಯನ್ನು ನಮ್ಮ ಹಿಂದಿನವರಿಂದ ಪಡೆದಿದ್ದೇವೆ. ಬಂಗಾಲದ ಎಲ್ಲವೂ ಹಿಂದು—ಮುಸ್ಲಿಮರಿಬ್ಬರಿಗೂ ಸಾಮಾನ್ಯವಾಗಿದೆ, ಆ ಬಗ್ಗೆ ಇಬ್ಬರೂ ಹೆಮ್ಮೆಪಡಬೇಕಾಗಿದೆ. ಬಂಗಾಲವು ಬಂಗಾಲವೇ. ಅದು ಪಂಜಾಬಲ್ಲ, ಮುಂಬಯಿಯಲ್ಲ, ಅಥವಾ ಮತ್ತಾವುದೂ ಅಲ್ಲ. ಮುಖ್ಯಮಂತ್ರಿಯು ಈ ದೃಷ್ಟಿಯಿಂದ ನೋಡಬಲ್ಲನಾದರೆ ನಾನು ಊರಿಂದ ಊರಿಗೆ ಅವನೊಡನೆ ಅತನ ಕೆಲಸವನ್ನು ಕೈಕೊಂಡು ಪ್ರತಿಯೊಂದು ಹಿಂದು ಸಭೆಯೊಡನೆಯೂ ಲಾರ್ಡ ಕರ್ಜನರಂತಹ ಸಮರ್ಥ ವೈಸರಾಯರು ಸಿದ್ಧಾಂತವೆಂದು ಮಾಡಿದ್ದನ್ನು ಮುರಿದು ಹಿಂದೆ ಹಿಂದು—ಮುಸ್ಲಿಮರು ಒಂದಾಗಿ ಧೈರ್ಯದಿಂದ ಹೋರಾಡಿದ ಬಂಗಾಲದ ಐಕ್ಯವನ್ನು ಚರ್ಚಿಸಿ ಒಬ್ಬ ಹಿಂದುವೂ ವಿರೋಧಿಯಾಗಿ ಉಳಿಯದಂತೆ ಮಾಡಿಯೇನು. ನಾನು ಸುಹ್ರವರ್ದಿಯಾಗಿದ್ದರೆ ನೀವು ಬಂಗಾಲವನ್ನು ವಿಭಜಿಸುವುದರ ಮೊದಲು ನನ್ನ ಶರೀರವನ್ನು ಎರಡು ಪಾಲು ಮಾಡಿರೆಂದು ಹೇಳುತ್ತಿದ್ದೆ. ಅವರು ಅಂತಹ ಪ್ರಬಲಪ್ರೇಮವನ್ನು ಬಂಗಾಲಕ್ಕಾಗಿಯೂ ಬಂಗಾಲಿಗಳಿಗಾಗಿಯೂ ಕಾರ್ಯರೂಪದಲ್ಲಿ ತೋರಿಸಿದರೆ ಹಿಂದುಗಳ ಭಯ ಸಂಶಯಗಳನ್ನು ಪರಿಹರಿಸಿ ಅದು ಎಂತಹ ಕಲ್ಲಿನಂತಿರುವ ಹಿಂದು ಹೃದಯವನ್ನಾದರೂ 'ಕರಗಿಸದಿರದು. ನಾನು ಕೇಳಿದ್ದೆಲ್ಲ ನಿಜವೇ ಆದರೆ ನೌಖಾಲಿಯನ್ನೂ ಕಲ್ಕತ್ತೆಯನ್ನೂ ನಾನೆಂದೂ ಮರೆಯುವಂತಿಲ್ಲ. ಮುಸ್ಲಿಮರ ದೃಷ್ಟಿಯಿಂದ ಬಿಹಾರವನ್ನು ಹೇಗೋ ಹಾಗೆ ಮುಸ್ಲಿಮರ ಮನಸ್ಸಿನಲ್ಲಿರುವ ಭಯಸಂಶಯಗಳನ್ನು ನಿವಾರಿಸಬೇಕೆಂದು ಬಿಹಾರದ ಹಿಂದುಗಳಿಗೆ ನಿಃಸಂದೇಹವಾಗಿ ಹೇಳಿದ್ದೇನೆ. ಭೇದಭಾವವನ್ನು ಗ್ರಹಿಸದ ಪ್ರೇಮ ಶಾಸನದ ಸಾರ್ವಭೌಮ ಆಡಳಿತದಲ್ಲಿ ನನಗೆ ಭರವಸೆಯಿದೆ!'

೧೧—೫—೪೭

'ಸೋದೇಪುರದಲ್ಲಿ ಶಹೀದ ಸಾಹೇಬರನ್ನು ಬರಮಾಡಿಕೊಳ್ಳುವ ಗೌರವ ನನಗೆ ದೊರೆತಿತು. ನಾನು ಅವರ ಮನೆಗೆ ಹೋಗಬೇಕೆಂದಿದ್ದೆ, ಆದರೆ ಅವರು ಬಿಡಲಿಲ್ಲ. ನಿನ್ನೆ ಹೇಳಿದ್ದರ ಬಗ್ಗೆ ಪಶ್ಚಾತ್ತಾಪ ಪಡಬೇಕಾಯ್ತೆಂಬುದಲ್ಲದೆ ಭೆಟ್ಟಿಯಿಲ್ಲದ ಮಾತುಕತೆಯ ಬಗ್ಗೆ ಹೇಳಲು ಮತ್ತೇನೂ ಇಲ್ಲ' ಎಂದು ಬಳಿಕ ಗಾಂಧೀಜಿಯವರು ಪ್ರಾರ್ಥನಾ ಸಭೆಯಲ್ಲಿ ತಮ್ಮ ಮುಂದಿಡಲಾದ ಎರಡು ಪ್ರಶ್ನೆಗಳನ್ನು ಎತ್ತಿಕೊಂಡರು. ಸಂಯುಕ್ತ ಬಂಗಾಲಕ್ಕಾಗಿ ದುಡಿಯಿರೆಂದು ನೀವು ನಮಗೆ ಹೇಳಿರುವಿರಿ; ಆದರೆ ವಿಭಕ್ತ ಹಿಂದುಸ್ತಾನದಲ್ಲಿ ಅವಿಭಕ್ತ ಬಂಗಾಲವು ಇರಬಲ್ಲುದೋ? ಎಂಬುದೇ ಮೊದಲನೆಯ ಪ್ರಶ್ನೆಯಾಗಿತ್ತು.

'ನಾನು ಹೇಳಿದ್ದನ್ನು ಚೆನ್ನಾಗಿ ಅರಿತುಕೊಂಡು ಅನುಸರಿಸಿದರೆ ಹಿಂದು—ಮುಸ್ಲಿಮರ ಸಂಯುಕ್ತೇಚ್ಛೆಯ ವಿನಾ ಏನೂ ಆಗಲಾರದು. ಹಿಂದುಮುಸ್ಲಿಮರ ಸಮ್ಮಭವಿತವ್ಯವನ್ನು ಮೂರನೆಯ ಪಕ್ಷದವರು ನಿರ್ಧರಿಸುವಂತಾಗದಿದ್ದರೆ ಅವರಿಬ್ಬರ ಸಂಯುಕ್ತೇಚ್ಛೆಯಿಂದಲೇ ಅದು ನಿರ್ಣಯವಾಗಬಲ್ಲುದು. ಆಗ ವಿಭಕ್ತ ಹಿಂದುಸ್ತಾನದ ಪ್ರಶ್ನೆಯೇ ಇರದು. ವಿಭಜಿಸುವಂತಹ ದೂರದ ಸಂಗತಿಯು ದುರ್ಭಾಗ್ಯವಶದಿಂದ ನಡೆಯುವುದೇ ಆದರೆ ಹಿಂದು ಮುಸ್ಲಿಮ ಬಂಗಾಲಿಗಳ ಸಂಯುಕ್ತವಾದ ಮತ್ತು ಸ್ವತಂತ್ರವಾದ ಮನಸ್ಸು ಯಾವುದನ್ನು ಸೇರಬೇಕೆಂಬುದನ್ನು ನಿರ್ಣಯಿಸುತ್ತದೆ.'

ಬ್ರಿಟಿಶರು ಇನ್ನೂ ಭಾರತವನ್ನು ಬಿಟ್ಟು ಹೋಗಿಲ್ಲ. ಅದೇ ನಮ್ಮ ಮೊದಲನೆಯ ಕೇಳಿಕೆಯಾಗಬೇಡವೆ? ಭಾರತೀಯರಿಗೆ ನಿಜವಾಗಿ ಅಧಿಕಾರವು ವರ್ಗಾಯಿಸಲ್ಪಟ್ಟ ಬಳಿಕ ನಮ್ಮೊಳಗಿನ ಸಂಗತಿಗಳನ್ನು ಸರಿಪಡಿಸಿಕೊಳ್ಳಲು ಕಾದಿರಲಾರೆವೇ? ಎಂಬುದೇ ಎರಡನೆಯ ಪ್ರಶ್ನೆಯಾಗಿತ್ತು.

'ಈ ಪ್ರಶ್ನೆ ನಿಜವಾಗಿ ಏಳುವುದೇ ಇಲ್ಲ. ಏಕೆಂದರೆ, ಇಡಿಯ ಬಂಗಾಲಕ್ಕೆ ಸಂಯುಕ್ತವಾದ ಒಂದೇ ಒಂದು ಮನಸ್ಸಿದ್ದಾಗ ಅದನ್ನು ಈಗ ಹೇಳಿದರೂ ಸರಿಯೆ, ಅಥವಾ ಬ್ರಿಟಿಶರು ನಿಜವಾಗಿ ಹೊರಟುಹೋದ ಮೇಲೆ ಹೇಳಿದರೂ ಸರಿಯೆ.'

೧೨—೫—೪೭

'ನಮ್ಮನ್ನು ಬಹುಬೇಗ ಆವರಿಸುತ್ತಿರುವ ಗುಂಡಾಪ್ರಭುತ್ವವನ್ನು ಹೇಗೆ ಎದುರಿಸಬೇಕೆಂಬುದೇ ಇಂದು ನನ್ನ ಮನಸ್ಸಿನಲ್ಲಿ ಮೊದಲು ಇದ್ದ ಆಲೋಚನೆ. ಇದನ್ನು ಇಡಿಯ ಹಿಂದುಸ್ತಾನವನ್ನು ಲಕ್ಷ್ಯದಲ್ಲಿಟ್ಟು ಹೇಳುತ್ತೇನೆ, ಬಹುಶಃ ಇಡಿ ಜಗತ್ತಿಗೇ ಈ ಮಾತು ಸ್ವಲ್ಪ ಹೆಚ್ಚುಕಡಿಮೆ ಅನ್ವಯಿಸಬಹುದಾಗಿದೆ. ತಮ್ಮಲ್ಲಿ ಅಂಥದೇನಿಲ್ಲವೆಂದು ತಿಳಿದುಕೊಂಡು ಹಿಂದುಗಳು ತಮ್ಮನ್ನು ತಾವು ವಂಚಿಸಿಕೊಳ್ಳದಿರಲಿ. ಸನಾತನಿಯೆಂದು ಹೇಳಿಕೊಳ್ಳುವ ನಾನು, ಅಂತಹ ಆಲೋಚನೆ ನಮ್ಮ ತಲೆಯಲ್ಲಿದ್ದರೆ ನಾವು ಮೂಢನ ಕಲ್ಪನಾ ರಾಜ್ಯದಲ್ಲಿದ್ದಂತೆ ಅದೀತೆನ್ನುವೆ. ಪರಕೀಯರ ಆಳಿಕೆ ಮುಗಿದನಂತರ ಅಧಿಕಾರ ವಹಿಸಲು ಗುಂಡಾಗಿರಿಯು ಸರಿಯಾದ ಸಿದ್ಧತೆಯೆನಿಸಲಾರದು. ಪ್ರಾರ್ಥನಾ ಸಭೆಗಳಲ್ಲಿ ಬುದ್ಧಿಯಿಲ್ಲದೆ ನಡುನಡುವೆ ತಲೆಹಾಕುವುದು ನಾನು ವರ್ಣಿಸುತ್ತಿರುವ ಕಾಹಿಲೆಯ ಸಣ್ಣ ಕುರುಹಲ್ಲ. ಅಸಹನೆಯು ಒಂದು ವಿವಿಧ ಗುಂಡಾಗಿರಿ. ದಿನಪತ್ರಿಕೆಗಳಲ್ಲಿ ಪ್ರಕಟಿಸಲ್ಪಡುವ ಅನಾಗರಿಕ ಕಾರ್ಯಗಳಿಂದ ಅದು ಕಡಿಮೆ ಲಜ್ಜಾಸ್ಪದ ಎನಿಸುವಂಥದ್ದಲ್ಲ. ಹಿಂದುಗಳಿರಲಿ ಮುಸ್ಲಿಮರಿರಲಿ, ಮತ್ತಾರಾದರೂ ಇರಲಿ—ಎಲ್ಲಾ ರಾಜಕೀಯ ಮುಂದಾಳುಗಳೂ ತಮ್ಮ ಕಣ್ಣೆದುರಿಗೆ ನಡೆಯುತ್ತಿರುವುದನ್ನು ವಿಚಾರ ಮಾಡಲಿ, ಪಡೆಯುವುದಕ್ಕೆ ಮುಂಚಿತವಾಗಿಯೇ ನಾವು ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಕಲಿಯಲು ಪ್ರಯತ್ನಿಸುತ್ತಿದ್ದೇವೆಂದು ಮುಂದಿನ ತಲೆಮಾರಿನವರು ಎನ್ನುವಂತಾಗದಿರಲಿ. ತಮ್ಮ ಹೆಮ್ಮೆಯ ಹಕ್ಕೆಂದು ಮಕ್ಕಳ ಮನವನ್ನು ತಿದ್ದುವ ಹಿಂದುಸ್ತಾನದ ಎಲ್ಲಾ ಶಿಕ್ಷಕರನ್ನೂ ಪರಶಾಸನದಿಂದ ಮುಕ್ತರಾಗಿರುವ ಅವರು ಈಗ ತಮ್ಮ ನಿಜವಾದ ಕರ್ತವ್ಯವನ್ನು ಅರಿತುಕೊಂಡು ತಮ್ಮ ವಿದ್ಯಾರ್ಥಿಗಳ ಮನಸ್ಸನ್ನು ಸರಿಯಾಗಿ ರೂಪಿಸಲೆಂದು ಕೇಳಿಕೊಳ್ಳುತ್ತೇನೆ!'

೧೩—೫—೪೭

ಈ ದಿನದ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿಯವರು ತಮ್ಮ ಮುಂದಿಟ್ಟ ಕೆಲವು ಪ್ರಶ್ನೆಗಳನ್ನು ಉತ್ತರಿಸಿದರು.

೧ ನೆಯದು:— ಹಿಂದು ಅಥವಾ ಮುಸ್ಲಿಮ ಎನಿಸುವ ನಮ್ಮ ಸಂಸ್ಕೃತಿಯನ್ನು ನಮಗಾಗಿ ಉಳಿಸಿಕೊಳ್ಳಲು ನಾವೇನು ಮಾಡತಕ್ಕದ್ದು? ಬೇರೆ ಯಾರೂ ನಮ್ಮ ಸಂಸ್ಕೃತಿಯನ್ನು ರಕ್ಷಿಸಲಾರರೆಂದು ಗಾಂಧೀಜಿ ಹೇಳಿದರು. 'ನಾವೇ ಅದನ್ನು ರಕ್ಷಿಸಬೇಕು, ನಮ್ಮ ತಪ್ಪಿನಿಂದಲೇ ಅದು ಹಾಳಾದೀತು. ತಮ್ಮ ತಿಳಿವಳಿಕೆಯ ಪ್ರಕಾರ ಒಂದೇ ಸಂಸ್ಕೃತಿಯುಳ್ಳ ಬಂಗಾಲದಲ್ಲಿ ಅದನ್ನು ಬಂಗಾಲಿಗಳೇ ರಕ್ಷಿಸತಕ್ಕದ್ದು!

೨ ನೆಯ ಪ್ರಶ್ನೆ:— ಮೇಲಿನ ಎಲ್ಲವೂ ತಾಳ ತಪ್ಪಿದ ಮೇಲೆ ತಳದಲ್ಲಿರುವ ಜನರ ಒಳ್ಳೆಯತನವು ಮೇಲಿನವರ ವಿಕಟ ಪ್ರಭಾವದ ವಿರುದ್ಧವಾಗಿ ನಿಂತು ಗೆಲ್ಲಬಹುದೆ?

ಇದಕ್ಕೆ ಉತ್ತರವಾಗಿ ಗಾಂಧೀಜಿಯವರು— 'ನಾವು ಹಿಡಕೊಂಡ, ನಮ್ಮ ಮೇಲೆ ನಿಲ್ಲುವ ಕೊಡೆಯಿಂದ ತೊಂದರೆಯಾದರೆ ನಾವೇ ಅದನ್ನು ತೆಗೆದೊಗೆಯುವಂತೆ ಮೇಲಿನದು ಕೆಟ್ಟರೆ ಅದನ್ನು ತೆಗೆಯುವದಾದರೂ ಕೆಳಗಿನವರ ಕರ್ತವ್ಯವೇ ಆಗಿದೆ. ಪಂಡಿತ ನೆಹರೂರವರು ಅದೇ ರೀತಿಯಲ್ಲಿ ಮೇಲಿನ ಪದವಿಯಲ್ಲಿದ್ದರು. ನಿಜವಾಗಿ ನೋಡಿದರೆ ಅವರು ಕೆಳಗಿನವರ ಆಧಾರದ ಮೇಲೆ ನಿಂತಿದ್ದರು. ಏನೂ ತೊಂದರೆಯಿಲ್ಲದೆ ಕೆಳಗಿದ್ದವರು ಅವರನ್ನು ತೆಗೆದುಹಾಕಬಲ್ಲರು. ಸಮೀಪಕ್ಕೆ ಬಂದರೆ, ಬಂಗಾಲದ ಮುಖ್ಯ ಮಂತ್ರಿಗಳಾದ ಸುಹ್ರವರ್ದಿ ಸಾಹೇಬರು ಅಯೋಗ್ಯರೆಂದು ಕಂಡರೆ ಅವರ ಕೆಳಗಿದ್ದವರು ಅವರನ್ನು ಖಂಡಿತವಾಗಿ ಹೊರದೂಡಬಲ್ಲರು—ಆದರೆ ದೇಹಶಕ್ತಿಯಿಂದಲ್ಲ, ಯಾವ ಮಾರ್ಗದಿಂದ ಕೆಳಗಿನವರ ಮುಂದೆ ಅವರು ನಿಲ್ಲಲಾರರೋ ಆ ಮಾರ್ಗದಿಂದ. ಮುಸ್ಲಿಂ ಮತದಾರರಿಂದ ಅವರು ಚುನಾಯಿತರಾದದ್ದೆಂಬುದು ತರ್ಕದ ಹೊರಗಿನ ಮಾತು. ಒಟ್ಟಿನ ಮೇಲೆ ಹೇಳುವುದಾದರೆ ಕೆಳಗಿನ ಜನರೆಲ್ಲ ಅಜ್ಞಾನಿಗಳಾದರೆ ಅವರ ಅಜ್ಞಾನವನ್ನು ತಮ್ಮ ಸ್ವಾರ್ಥಕ್ಕಾಗಿ ಇತರರು ದುರುಪಯೋಗಪಡಿಸಿಕೊಳ್ಳುತ್ತಾರೆ. ಇಂಗ್ಲೀಷರ ಕತೆ ಅಂಥದೇ ಆಗಿತ್ತು. ಅವರು ತಮ್ಮ ಆಳವರಿತು ಬುಡವು ಮೇಲಿನದನ್ನು ಆಧರಿಸುವುದೆಂಬುದನ್ನು ಗ್ರಹಿಸಿದ ಮೇಲೆ ಅವರದೆಲ್ಲವೂ ಸರಿಹೋಗುತ್ತದೆ. ಆದುದರಿಂದ ಮೇಲಿನದು ಕೆಟ್ಟಿದೆಯೆಂಬುದರಿಂದ ಕೆಳಗಿನದು ಮೂಲತಃ ತಪ್ಪುದಾರಿಹಿಡಿದಿದೆಯೆಂದು ನಾನು ಹೇಳಬಯಸುತ್ತೇನೆ. ಹೀಗಿರುವುದರಿಂದ ಕೆಳಗಿನವರು ತಮ್ಮ ಅಜ್ಞಾನ ಜನ್ಯವಾದ ಅಸಹಾಯತೆಯನ್ನು ದೂರೀಕರಿಸಬೇಕು.

ಪ್ರಶ್ನೆಗಳನ್ನು ಉತ್ತರಿಸುವ ಮೊದಲು ಕೆಲವು ಪ್ರದರ್ಶಕರತ್ತ ಹೊರಳಿ ಅವರಿಗಾಗದುದಾವುದನ್ನಾದರೂ ತಾವು ಮಾಡೇವೆಂಬ ಭಯವನ್ನು ಇಟ್ಟುಕೊಳ್ಳುವ ಅಗತ್ಯವಿಲ್ಲೆಂದು ಗಾಂಧೀಜಿ ಯೆಂದರು. 'ನನಗಲ್ಲದೆ ನಾನು ಉಳಿದ ಯಾರಿಗೂ ಪ್ರತಿನಿಧಿಯಲ್ಲ; ನಾನು ಬರಿಯ ಬುದ್ಧಿವಾದವನ್ನು ಮಾತ್ರ ಹೇಳಬಲ್ಲೆ. ಬೇಕಾದರೆ ನೀವು ತೆಗೆದುಕೊಳ್ಳಬಹುದು. ಇಲ್ಲದಿದ್ದರೆ ಬಿಟ್ಟುಬಿಡಬಹುದು. ಆದುದರಿಂದ ಬಂಗಾಲವು ಸಂಯುಕ್ತವಾಗಿ ಉಳಿಯಲಿ, ಅಥವಾ ವಿಭಕ್ತವಾಗಲಿ—ಅದು ನಿಮ್ಮದೇ ಕೆಲಸವೆಂದಾದೀತು.

೧೪—೫—೪೭

ಈದಿನ ಪ್ರಾರ್ಥನೋತ್ತರ ಭಾಷಣದಲ್ಲಿ ತಾವು ಪಾಟ್ನಾಕ್ಕೆ ಹೋಗಿ ಅಲ್ಲಿಂದ ಮುಂದೆ ದಿಲ್ಲಿಗೆ ತೆರಳಿ ದಿಲ್ಲಿಯ ಕೆಲಸ ಮುಗಿದ ನಂತರ ಕಲ್ಕತ್ತೆಗೆ ಮರಳಿ ಬರುವೆವೆಂದು ಗಾಂಧೀಜಿಯವರು ಹೇಳಿದರು. ಮುಖ್ಯಮಂತ್ರಿಗಳೊಡನೆ ೨ ಗಂಟೆಗಳ ಕಾಲ ಅವರು ಗಲಭೆಯಾದ ಪ್ರದೇಶಗಳನ್ನು ಪರಾಮರ್ಶಿಸಿದರು. ಆಗಸ್ಟ ಗಲಭೆಗಳಿಂದಾದವಿನಾಶಕ್ಕಿಂತಈಗಿನಗಲಭೆಗಳಿಂದಾದ ಹಾನಿಯು ಬಹಳ ಕಡಿಮೆಯೆಂದು ಅಭಿಪ್ರಾಯಪಟ್ಟರು. ಕಲ್ಕತ್ತೆಯಲ್ಲಿ ಇದೇ ಕೊನೆಯ ಗಲಭೆಯಾಗಲೆಂದು ತಮಗಿರುವ ಆಸೆಯನ್ನು ಗಾಂಧೀಜಿಯವರು ವ್ಯಕ್ತಪಡಿಸಿದರು. ಅನಂತರ ಅವರು ತಮ್ಮೆದುರಿಟ್ಟ ೨ ಪ್ರಶ್ನೆಗಳಿಗೆ ಉತ್ತರ ಕೊಟ್ಟರು.

ಒಂದನೆಯ ಪ್ರಶ್ನೆ:— ಕಲ್ಕತ್ತೆಯು ವಾಸ್ತವಿಕವಾಗಿ ಹಿಂದು ಮತ್ತು ಮುಸ್ಲಿಂ ವಲಯಗಳೆಂದು ವಿಭಕ್ತವಾಗಿದೆ. ಮೊದಲಿನಂತೆ ಶಾಂತಜೀವನ ನಡೆಯುವಂತಾಗಬೇಕಾದರೆ ಏನು ಮಾಡಲು ಸಾಧ್ಯವಾದೀತು? ಉತ್ತರ; 'ಒಂದೇ ಒಂದು ಮಾರ್ಗವೆಂದರೆ, ಕನಿಷ್ಠ ಒಂದು ಪಕ್ಷದವರಾದರೂ ಸಂಪೂರ್ಣ ಸತ್ಯವಂತರೂ ಅಹಿಂಸಾ ನಿರತರೂ ಆಗಿರಬೇಕು. ಆಗ ಅವರು ದೇವರಿಗಲ್ಲದೆ ಅನ್ಯರಿಗೆ ಅಂಜುವುದಿಲ್ಲ. ಅಂಥವರೇ ನಿಜವಾಗಿಯೂ ಧೀರರು. ಎಲ್ಲಾ ಪಕ್ಷಗಳೂ ಅವರೊಡನೆ ಸ್ನೇಹ ಬೆಳೆಸುವವು ಮತ್ತು ಗುಂಡಾಜನರು ಕೂಡ ಅವರ ಮುಂದೆ ತಮ್ಮ ಗುಂಡಾಗಿರಿಯನ್ನು ಬಿಟ್ಟುಬಿಡುತ್ತಾರೆ. ನನಗೆ ಇದಕ್ಕಿಂತ ಉತ್ತಮವೆನಿಸಬಹುದಾದ ದಾರಿ ಗೊತ್ತಿಲ್ಲ. ಬಹುಸಂಖ್ಯಾಕರಾಗಿರುವ ಮುಸ್ಲಿಮರಿಗೆ ಆ ನೇತೃತ್ವ ವಹಿಸಿರೆಂದು ಅರಿಕೆ ಮಾಡಿಕೊಂಡಿದ್ದೇನೆ!'

ಎರಡನೆಯ ಪ್ರಶ್ನೆ: ಹಿಂದುಗಳು ಕುರಾಣನ್ನೂ ಕಲಿಯಬೇಕೆಂದು ನೀವೇಕೆ ಹೇಳುತ್ತೀರಿ? ಅವರು ತಮ್ಮ ಧರ್ಮವೊಂದನ್ನು ಅಭ್ಯಾಸ ಮಾಡಿದರೆ ಸಾಲದೇ?

ಗಾಂಧೀಜಿಯವರು ಉತ್ತರಿಸುತ್ತ 'ಭಿನ್ನ ಧರ್ಮ ಗ್ರಂಥಗಳ ಅನುಶೀಲನವನ್ನು ಪ್ರತಿಯೊಬ್ಬನೂ ಮಾಡತಕ್ಕದ್ದು. ಇದರಿಂದ ತಮ್ಮ ಧರ್ಮವನ್ನು ಶುದ್ಧವಾಗಿರಿಸಲೂ ಅದರಲ್ಲಿಯ ಕಶ್ಮಲಗಳನ್ನು ಹೊರಪಡಿಸಲೂ ಜನರು ಶಕ್ತರಾಗುತ್ತಾರೆ. ಅಷ್ಟೇ ಅಲ್ಲ, ನಮ್ಮಲ್ಲಿ ಕ್ರೈಸ್ತರು ಮುಸ್ಲಿಮರು ಮತ್ತು ಇತರ ಮತಾನುಯಾಯಿಗಳು ಇದ್ದಾರೆ. ಅವರು ತಮ್ಮ ಸಹೋದರರೆಂಬ ಭಾವನೆಯಿದ್ದರೆ ಹಿಂದುಗಳು ಅವರ ಮತಗಳನ್ನು ಅಭ್ಯಸಿಸಬೇಕು.'

### ಬಂಕಿಪುರ (ಪಾಟ್ನಾ)

೧೫—೫—೪೭

ಇಂದು ಪ್ರಾರ್ಥನಾ ಸಭೆಯ ನಡುವಣ ವಿರಾಮ ಕಾಲದಲ್ಲಿ ಗಾಂಧೀಜಿಯವರು, 'ನಾನು ದಿಲ್ಲಿಗೂ ಕಲ್ಕತ್ತೆಗೂ ಹೋಗಿದ್ದೆ. 'ಮಾಡು ಇಲ್ಲವೆ ಮಡಿ' ಎಂಬ ವ್ರತವು ಬಿಹಾರ ನೌಖಾಲಿಗಳಿಗಾಗಿ ಮಾತ್ರ ನಾನು ಕೈಕೊಂಡದ್ದಾದುದ

—೯ ನೇ ಪುಟಕ್ಕೆ

# ಮೊಗಲ ರಾಜಪುತ್ರನ ಹಿಂದೂ ಮುಸ್ಲಿಂ ಧರ್ಮಸಮನ್ವಯ ಸಂದೇಶ

( ಶ್ರೀ ಎ. ರಾಘವನ್ನರಿಂದ )

ಹಿಂದುಸ್ಥಾನದ ಇಂದಿನ ರಾಜಕೀಯ ದುಸ್ಥಿತಿಯನ್ನು ನೋಡಿದ ಯಾವನೇ ಹಿಂದೀ ಇತಿಹಾಸ–ಸಂಸ್ಕೃತಿಗಳ ಅಭ್ಯಾಸಿಯೂ ಮೊಗಲ ಸಿಂಹಾಸನವನ್ನು ಶಾಹಜಹಾನನ ನಂತರ ದಾರಾಶಿಕೋಹನು ಏರಿದ್ದರೆ ಸ್ಥಿತಿಗತಿ ಇಂದು ಎಷ್ಟು ಭಿನ್ನವಾಗಿರುತ್ತಿತ್ತೆಂದು ಪರಿತಪಿಸದಿರಲಾರ. ಅಕಬರನಲ್ಲಿ ಧಾರ್ಮಿಕ ಸಮನ್ವಯದ ಭಾವನೆಯು ಉದ್ಭವವಾಗಿದ್ದರೆ ಅವನ ಮರಿಮಗನಾದ ಯುವರಾಜ ದಾರಾಶಿಕೋಹನಲ್ಲಿ ಅದು ಪೂರ್ತಿ ವಿಕಸಿತವಾಗಿ ಪರಿಣತಿಯನ್ನು ಮುಟ್ಟಿತ್ತು.

ದಾರನನ್ನು ಗಲ್ಲಿಗೇರಿಸಿದ ನಂತರ ಅವನ ಗುರುವಾದ ಸರ್ಮದನನ್ನು ಎದುರಿಸಿ ಔರಂಗಜೇಬನು, "ಶಾಹಜಹಾನನ ನಂತರ ದಾರಾನೇ ಸಿಂಹಾಸನವನ್ನೇರುವನೆಂಬ ನಿನ್ನ ಭವಿಷ್ಯದ ಗತಿಯೇನಾಯಿತು?" ಎಂದು ಕೇಳಿದನು. ತನ್ನ ರಾಜ ಶಿಷ್ಯನನ್ನರಿತ ಸರಮದನು ಔರಂಗಜೇಬನಿಗೆ ಕೊಟ್ಟ ಉತ್ತರವಿದು: "ನನ್ನ ಭವಿಷ್ಯ ಸುಳ್ಳಾಗಿಲ್ಲ. ಪರಮಾತ್ಮನು ಅವನಿಗೆ ಅಕ್ಷಯ್ಯ ಸಾರ್ವಭೌಮತ್ವವನ್ನು ಕರುಣಿಸಿದ್ದಾನೆ."

ಅವನ ಗುರುಗಳಲ್ಲೊಬ್ಬನಾದ ಮುಲ್ಲಾ ಶಹಾನು, ತೈಮೂರ, ಶಾಹಜಹಾನರು ವೈಭವದ ರಾಜರಾಗಿದ್ದರೆ ದಾರಾನು ಹೃದಯ ಸಾಮ್ರಾಟನಾಗಿದ್ದನೆಂದು ಹೇಳಿದ್ದಾನೆ. ನಿಜವಾಗಿ ದಾರಾನು ದಿಲ್ಲಿಯ ಸಿಂಹಾಸನಕ್ಕಾಗಿ ಅಷ್ಟು ಆತುರನಾಗಿದ್ದಿಲ್ಲ. ಮೈನುದ್ದೀನ ಚಿಸ್ತಿಯಂಥ ಸಾಧುವಿನ ಪ್ರಸಾದದಿಂದ ಹುಟ್ಟಿದ ದಾರಾನು ಹಿಂದೂ ಮುಸ್ಲಿಮ ಆತ್ಮಾನುಭವಿಗಳ ಮಧ್ಯದಲ್ಲಿ ಬೆಳೆದು ಲೌಕಿಕ ವೈಭವಕ್ಕಿಂತಲೂ ಆಧ್ಯಾತ್ಮಿಕ ಸಿದ್ಧಿಯ ಕಡೆಗೆ ಹೆಚ್ಚು ಒಲಿದಿದ್ದನು.

ತನ್ನ ೨೮ ವಯಸ್ಸಿನಲ್ಲಿ ಬರೆದ "ಸಫೀನತ್—ಉಲ್—ಔಲಿಯಾ" ಗ್ರಂಥದಲ್ಲಿ ತನ್ನ ಸಾಕ್ಷಾತ್ಕಾರವನ್ನು ಕುರಿತು ಅವನು ಬರೆದುದು: "ಪರಮಾತ್ಮನು ನಿನಗೆ ಜಗತ್ತಿನಲ್ಲಾವ ಚಕ್ರವರ್ತಿಯೂ ಸಂಪಾದಿಸಿರದಂಥ ವಸ್ತುವನ್ನು ದಯಪಾಲಿಸಿದ್ದಾನೆ." ಅರಸರೆಲ್ಲರ ಅರಸನ ಈ ಸಾನ್ನಿಧ್ಯಕ್ಕಾಗಿಯೇ ಅವನು ಹಾತೊರೆದಿದ್ದನು, ಹೆಣಗಿದ್ದನು.

## ನಿಜವಾದ ಅನುಭವಿ

ದಾರಾನನ್ನು ಸೂಫೀ ಸಾಧುಗಳ ಧರ್ಮಕ್ಕೆ ದೀಕ್ಷಿತನನ್ನಾಗಿ ಮಾಡಿದವನು ಮಿಯಾಮೀರನು. ವೈದಿಕ ಧರ್ಮದೊಳಗೆ ವೇದಾಂತ ದರ್ಶನ ಉದಿಸಿದಂತೆ ಋಷಿ ಮಹಮದನ ಧರ್ಮದೊಳಗೆ ಉದಿಸಿದ ಈ ಸೂಫಿ ದರ್ಶನದಲ್ಲಿ ದಾರಾನು ಗಾಢವಾದ ರಸಾನುಭೂತಿಯನ್ನು ಕಂಡಿದ್ದನು. "ರಿಸಾಲಾ—ಇ—ಹಕ್ ನುಮಾ" ಎಂಬ ತನ್ನ ಚಿಕ್ಕ ಗ್ರಂಥದಲ್ಲಿ ದೇವರು ತನಗೆ "ತೌಹಿದ" ಅಥವಾ ದೈವೀ ಐಕ್ಯವನ್ನು ದಯಪಾಲಿಸಿದ್ದನೆಂದು ಅವನು ಬರೆದಿದ್ದಾನೆ. ಸನಾತನಿ ಮುಲ್ಲಾ–ಮೌಲವಿಗಳ ಒಣ ಸಿದ್ಧಾಂತಗಳನ್ನು ಬದಿಗೊತ್ತಿ ಅವನು ವೈಯಕ್ತಿಕ ಸಿದ್ಧಿ ಅಥವಾ ಅನುಭೂತಿಯ ಮಾರ್ಗವನ್ನು ಹಿಡಿದಿದ್ದನು. ಸ್ವಧರ್ಮದಲ್ಲಿಯೂ ಪಾರಂಗತನಾಗಿದ್ದ ಅವನು ಪವಿತ್ರ ಕುರಾಣದ ಎಷ್ಟೋ ವಾಕ್ಯಗಳ ಮೇಲೆ ಹೊಸ ಬೆಳಕು ಚೆಲ್ಲಿದ್ದನು.

ವಿವಿಧ ಧರ್ಮಗಳ ತುಲನಾತ್ಮಕ ಅಭ್ಯಾಸ ಮಾಡಿ ಅವನು ಬರೆದ ಗ್ರಂಥಗಳಿಂದ ಅವನು ಶುಷ್ಕ ವಿದ್ವಾಂಸನಾಗಿರದೆ ನಿಜವಾದ ಅನುಭವಿಯಾಗಿದ್ದನೆಂದು ಸಿದ್ಧವಾಗುತ್ತದೆ. ಅವನ ಮತ್ತೆರಡು ಗ್ರಂಥಗಳಾದ "ಸಕೀನತ್—ಉಲ್—ಔಲಿಯಾ" ಮತ್ತು "ಹಸನತ್–ಉಲ್–ಆರಿಫೀನ್" ಇವುಗಳಲ್ಲಿ ಮೊದಲನೆಯದು ೪೧೧ ಸೂಫೀ ಸಾಧುಗಳ ಜೀವನವನ್ನೂ ಮಹಿಮೆಯನ್ನೂ ಬಣ್ಣಿಸಿದ್ದರೆ ಸೂಫೀ ಸೂತ್ರಸಂಗ್ರಹವಾದ ಎರಡನೆಯದರಲ್ಲಿ ಅವನು ತನ್ನ ಮತ್ತು ಇತರ ಸೂಫೀ ಸಾಧುಗಳ ಆನಂದೋನ್ಮತ್ತ ಉದ್ಗಾರಗಳ ಮೇಲೆ ಸನಾತನಿಗಳು ಮಾಡಿದ ಟೀಕೆಗಳಿಗೆ ಉತ್ತರ ಕೊಟ್ಟಿದ್ದಾನೆ.

ಸತ್ಯ ಸಾಕ್ಷಾತ್ಕಾರದಲ್ಲಿ ಮಗ್ನರಾದ ಎಲ್ಲ ಸಾಧುಗಳಂತೆ ಸತ್ಯಕ್ಕೆ ವಿವಿಧ ರೂಪಗಳಿವೆ ಯೆಂಬರಿವಿನಿಂದ ಬೇರೆ ಧರ್ಮಗಳ ಅನುಭವಿಗಳೊಡನೆ ದಾರನು ಬಾಂಧವ್ಯ ಬೆಳೆಸಿದ್ದನು. ಅವನು ಕೃಷ್ಣನ್ನರೊಡನೆ ಕೃಷ್ಣನ್ನನಾಗಿಯೂ ಕಾಶಿಯ ಬ್ರಾಹ್ಮಣರೊಡನೆ ಪಂಡಿತ ಸಂನ್ಯಾಸಿಯಾಗಿಯೂ ವರ್ತಿಸುತ್ತಿದ್ದನೆಂದು ಬರ್ನಿಯರನೆಂಬ ಪ್ರವಾಸಿ ದೇಶಸಂಚಾರಿ ಬರೆದಿದ್ದಾನೆ.

ಕಾಶಿ ಪ್ರಯಾಗಗಳಂಥ ತೀರ್ಥ ಕ್ಷೇತ್ರಗಳಲ್ಲಿ ಮೊಗಲ ರಾಜರು ಯಾತ್ರಿಕರಿಂದ ಎತ್ತುತ್ತಿದ್ದ ಯಾತ್ರಿಕ ಕರ (ಜೆಜಿಯಾವನ್ನು) ರದ್ದುಗೊಳಿಸಬೇಕೆಂದು ಕಾಶಿಯ ಕವೀಂದ್ರಾಚಾರ್ಯ ಸರಸ್ವತಿ ಶಾಹಜಹಾನನ ಮುಂದೆ ವಾದಿಸಿದಾಗ ದಾರಾನು ತನ್ನ ತಂದೆಯೊಡನೆ ರಾಜಸಭೆಯಲ್ಲಿ ಆಸೀನನಾಗಿದ್ದನು. ಆಗ ಕವೀಂದ್ರಾಚಾರ್ಯನು ಹಿಂದೂ ಧರ್ಮದ ಅನೇಕ ಸತ್ಯಗಳನ್ನು ವಿವರಿಸಿದ್ದನು. ಬಿಕಾನೀರ ಪುಸ್ತಕಾಲಯದಲ್ಲಿರುವ ಕವೀಂದ್ರನ ಹಿಂದೀ ಗೀತಗಳ ಮಾತೃಕೆಯೊಂದರಿಂದ ಕವೀಂದ್ರನೂ ದಾರಾನೂ ಅನ್ಯೋನ್ಯವಾಗಿದ್ದರೆಂದು ತಿಳಿಯುತ್ತದೆ. ಗೋಸ್ವಾಮಿ ನೃಸಿಂಹಾಶ್ರಮ ಸರಸ್ವತಿಯನ್ನು ನಾರಾಯಣಾಷ್ಟಾಕ್ಷರ ಮಂತ್ರದಿಂದ ಸ್ತುತಿಸಿ ಸಂಸ್ಕೃತದಲ್ಲಿ ಅವನಿಗೆ ದಾರಾನು ಬರೆದ ಪತ್ರವೊಂದು ಉಪಲಬ್ಧವಾಗಿದೆ.

ಹಿಂದೂ ಸಾಧುಗಳಲ್ಲಿ ದಾರಾನಿಗೆ ತೀರ ಹತ್ತಿರದವನಾಗಿದ್ದವನು ಬಾಬಾ ಲಾಲ ಬೈರಾಗಿ. ಅವನ ವಿಷಯದಲ್ಲಿ ದಾರಾನು ಪದೇ ಪದೇ ಉಲ್ಲೇಖಿಸಿದ್ದುಂಟು. ಬಾಬಾ ಲಾಲನನ್ನು ದಾರಾನು ಮೊದಲು ಕಂಡದ್ದು ಲಾಹೋರಿನಲ್ಲಿ. ಬಾಬಾ ಲಾಲನೊಡನೆ ಈ ರಾಜಪುತ್ರನ ಚರ್ಚೆಗಳನ್ನು ಅವನ ಶಿಷ್ಯನಾದ ಚಂದ್ರಭಾನು ಎಂಬವನು "ಮುಕಾಲಿಮಾ-ಇ-ದಾರಾ ಶಿಕೋಹ ವ ಬಾಬಾ ಲಾಲ" ಎಂಬ ಗ್ರಂಥದಲ್ಲಿ ಬರೆದಿಟ್ಟಿದ್ದಾನೆ. ಮುಸ್ಲಿಮ ಸಾಧುಗಳ ಮೇಲೆ ದಾರಾನು ಬರೆದ ಪುಸ್ತಕದಲ್ಲಿ ಬಾಬಾಲಾಲ ಬೈರಾಗಿಯೂ ಸೇರಿಸಲ್ಪಟ್ಟಿರುವದನ್ನು ನೋಡಿದರೆ ಈ ಹಿಂದೂ ಸಾಧುವಿನಲ್ಲಿ ಅವನ ಆದರ ವೆಷ್ಟಿತ್ತೆಂದು ಕಾಣಬಹುದು.

## ಯೋಗಪ್ರಿಯ

"ರಿಸಾಲಾ–ಇ–ಹಕ್ ನುಮಾ" ದಲ್ಲಿ ದಾರನು ಯೋಗಸಾಧನೆಯ "ಪ್ರಾಣಾಯಾಮ" ವನ್ನು ನಿರೂಪಿಸಿದ್ದಾನೆ. ಅದ್ವೈತ ಸಾಧನೆಯಲ್ಲಿ ಬಹಳ ಮುಂದುವರಿದ ಸಾಧುಗಳಂತೆ–ಯೋಗ ವಾಸಿಷ್ಠದ ಕಡೆಗೆ ಅವನು ಸೆಳೆಯಲ್ಪಟ್ಟು ಅಧ್ಯಾತ್ಮ ಸಾಧನೆಯ ಮೇಲ್ಪಟ್ಟವನ್ನೇರಿದನು. ಅಕಬರನ ಆಜ್ಞೆಯ ಮೇರೆಗೆ ಸಿದ್ಧವಾದ ಯೋಗ ವಾಸಿಷ್ಠದ ಪರ್ಶಿಯನ್ ಅನುವಾದವೊಂದು ಆಗಲೆ ಇದ್ದರೂ ಅದು ಮನಸಿಗೆ ಬಾರದೆ ಅವನು ಹೊಸ ಸರಳ ಅನುವಾದವೊಂದನ್ನು ಮಾಡಿಸಿದನು. ಅದಕ್ಕೆ ಅವನು ಬರೆದ ಮುನ್ನುಡಿಯಲ್ಲಿ ವಸಿಷ್ಠ ಋಷಿಯೂ ಶ್ರೀರಾಮ ಚಂದ್ರನೂ ಕನಸಿನಲ್ಲಿ ಬಂದು ಈ ಕಾರ್ಯ ಮಾಡಲು ಅಜ್ಞಾಪಿಸಿದರೆಂದು ಹೇಳಿದಾನೆ.

ಇದೇ ಬಗೆಯಾಗಿ ಅವನು ಭಗವದ್ಗೀತೆಯನ್ನೂ ಅನುವಾದ ಮಾಡಿದನು. ಅವನನ್ನು ಗಲ್ಲಿಗೇರಿಸುವ ಎರಡುವರ್ಷ ಮೊದಲು ಉಪನಿಷತ್ತುಗಳನ್ನು "ಸಿರ್. ಇ- ಅಕಬರ್" ಅಂದರೆ "ಮಹಾರಹಸ್ಯ" ಯೆಂಬ ಹೆಸರಲ್ಲಿ ಪರ್ಶಿಯನ್ ಭಾಷೆಗೆ ಅನುವಾದಿಸಿದ್ದನು.

## ಮಜಮಾ-ಉಲ್-ಬಹರೇಂ

ಹಿಂದೂ ಧರ್ಮದ ಗುಣಗ್ರಹಣಮಾಡಿದ್ದರೂ ದಾರಾನು ಸ್ವಧರ್ಮದಿಂದ ಚ್ಯುತನಾಗಿರಲಿಲ್ಲ. ಇದರಿಂದ ಉಭಯ ಧರ್ಮಗಳ ಸಮನ್ವಯಕ್ಕೆ ಅವನು ಮಾಡಿದ ಪ್ರಯತ್ನಗಳ ಮಹತ್ವ ಇನ್ನಷ್ಟು ಹೆಚ್ಚುತ್ತದೆ. ಈ ಎರಡು ಧರ್ಮಗಳನ್ನು ತುಲನಾತ್ಮಕವಾಗಿ ಅಭ್ಯಸಿಸಿ ಅವನು ತನ್ನ ವಿಚಾರಗಳನ್ನು "ಮಜಮಾ—ಉಲ್—ಬಹರೇಂ" (ಅಂದರೆ "ಸಾಗರದ್ವಯಸಂಗಮ") ಎಂಬ ಗ್ರಂಥದಲ್ಲಿ ಮಂಡಿಸಿದ್ದಾನೆ.

ಅದಕ್ಕಿಂತಲೂ ಕೌತುಕದ ಸಂಗತಿಯೆಂದರೆ ಈ ಪರ್ಶಿಯನ್ ಗ್ರಂಥದ ಸಂಸ್ಕೃತ ಅನುವಾದವನ್ನು "ಸಮುದ್ರ ಸಂಗಮ ಗ್ರಂಥ" ಎಂಬ ಹೆಸರಿನಿಂದ ಅವನು ರಚಿಸಿದ್ದು. ತನ್ನ ಇತರ ಕೃತಿಗಳಂತೆ ಇಲ್ಲಿಯೂ ದಾರಾನು ತನ್ನನ್ನು ಸಾಕ್ಷಾತ್ಕಾರಿಯೆಂದೂ ರಾಗದ್ವೇಷ ವಿದೂರನೆಂದೂ ಹೇಳಿಕೊಂಡಿದ್ದಾನೆ. ಅದರ ಪ್ರಾರಂಭದಲ್ಲಿ ತಾನು ವೈದಿಕರ ಸಿದ್ಧಾಂತಗಳನ್ನರಿಯುವ ಇಚ್ಛೆಯಿಂದ ಅನೇಕ ಹಿಂದೂ ಸಾಧುಗಳನ್ನು ಕಂಡದ್ದಾಗಿಯೂ ಗುರು ಬಾಬಾಲಾಲನ ಉಪದೇಶದಿಂದ ತಪೋಧ್ಯಾನ ಸಾಧನೆಯ ಮೂಲಕ ಸಿದ್ಧಿಯನ್ನು ಪಡೆದುದಾಗಿಯೂ ಕಾಣಿಸಿದ್ದಾನೆ. ಬಾಬಾಲಾಲನೊಡನೆ ಪದೇ ಪದೇ ಸಂಪರ್ಕ ಬಂದು ಅವನಿಗೆ ಇಸ್ಲಾಂ ಮತ್ತು ಹಿಂದೂ ಧರ್ಮಗಳಲ್ಲಿರುವ ಅಂತರ ಕೇವಲ ಶಬ್ದಮೂಲವಾಗಿದೆಯಲ್ಲದೆ ತತ್ವಮೂಲವಾಗಿಲ್ಲವೆಂಬ ಅರಿವುಂಟಾಯಿತು. ಅನಂತರ ಅವನು ಉಭಯ ಧರ್ಮಗಳನ್ನು ಸಮನ್ವಯಗೊಳಿಸಿ ಏಕತರ ಜ್ಞಾನವನ್ನು ಸಂಪಾದಿಸುವ ಮೌಲಿಕ ಗ್ರಂಥವನ್ನು ರಚಿಸಿದನು.

## ಭೇದವಿಲ್ಲ

ದಾರಾ ಹೇಳುತ್ತಾನೆ :

"ಸಮಸ್ತ ದರ್ಶನಗಳ ಫಲವು ಪೂರ್ವಗ್ರಹ ಆಸಹನೆಗಳಲ್ಲದೆ ಸತ್ಯಶೋಧನೆ ಮಾಡುವದೇ ಆಗಿರಬೇಕೆಂದು ಬಲ್ಲವರು ಭಾವಿಸುತ್ತಾರೆ. ಯಾವುದೇ ಧರ್ಮದ ಅಂತರಂಗಕ್ಕೆ ಪ್ರವೇಶ ಪಡೆಯುವದು ಎಷ್ಟು ದುಸ್ಸಾಧ್ಯವಾದ ಕೆಲಸವೆಂದು ಬಲ್ಲವರೇ ಬಲ್ಲರು. ಅಂಥ ಜ್ಞಾನದಿಂದ ಸಂಪನ್ನರಾದವರೇ ಅಂಥ ತಿಳಿವಿನಿಂದ ಆನಂದವನ್ನು ಅನುಭವಿಸುವರಲ್ಲದೆ ಭೇದಗಳನ್ನೇ ಕಾಣುವ ಸಂಕುಚಿತಬುದ್ಧಿಯವರಲ್ಲ. ನಾನೇ ಕಂಡುಂಡ ಈ ಸಂಗತಿಗಳನ್ನು ನನ್ನ ಸಮಾನ ಧರ್ಮರಾದವರ ಉಪಯೋಗಕ್ಕಾಗಿ ಇಲ್ಲಿ ಸಂಗ್ರಹಿಸಿದ್ದೇನಲ್ಲದೆ ಭೇದೈಕ ದೃಷ್ಟಿಗಳಾದ ಎರಡೂ ಧರ್ಮಗಳ ಅಜ್ಞ ಜನರಿಗಾಗಿ ಅಲ್ಲ."

"ಸತ್ಯದ ಸಂದೇಶ ಎತ್ತಣಿಂದ ಬಂದರೂ ಅದನ್ನು ನಾನು ಆಲಿಸುವವನೆ." ಪರಮಾತ್ಮನೊಬ್ಬನಿಂದಲೇ ತನಗೀ ಶಕ್ತಿಯೂ ಸಹಾಯವೂ ದೊರೆಯುತ್ತಿದೆಯೆಂದೂ ಅವನು ಹೇಳಿದ್ದಾನೆ.

ಮುಂದೆ ದಾರಾನು ಉಭಯ ಧರ್ಮಗಳ ಐಕ್ಯವನ್ನು ಸಿದ್ಧ ಮಾಡಿ ತೋರಿಸಲು ಹಿಂದೂ ಧರ್ಮ—ಇಸ್ಲಾಮುಗಳಲ್ಲಿರುವ ಪಾರಿಭಾಷಿಕ ಹಾಗು ತಾತ್ವಿಕ ಸಾಮ್ಯವನ್ನು ನಿರ್ದೇಶಿಸಿದ್ದಾನೆ. ಉಭಯ ಧರ್ಮಗಳ ಐಕ್ಯವನ್ನು ಮನಗಾಣಿಸಲು ಎರಡರಲ್ಲಿಯೂ ಇರುವ ಈ ಕೆಳಗಿನ ವಿಷಯಗಳನ್ನು ಬೊಟ್ಟಿಟ್ಟು ತೋರಿದ್ದಾನೆ.

೧. ಪಂಚಭೂತಗಳು
೨. ಪಂಚೇಂದ್ರಿಯಗಳು
೩. ಧ್ಯಾನ ಮತ್ತು ಅಧ್ಯಾತ್ಮಿಕ ಸಾಧನೆ

ಜೀವಮಾತ್ರನು ಜೀವನಮಾತ್ರದಿಂದ ನಡೆಸುತಿರುವ ಅಜಪ ಜಪದ ಶ್ವಾಸೋಚ್ಛ್ವಾಸ ಕ್ರಿಯೆಯ ವಿವರಣೆ ಯೋಗ ವಿದ್ಯೆಯಲ್ಲಿರುವದನ್ನು ಉಲ್ಲೇಖಿಸಿ ದಾರಾನು ಕುರಾಣದಲ್ಲಿಯೂ ಈ ಜಪ ವಿದ್ಯೆಯ ಉಲ್ಲೇಖವಿದ್ದರೂ ಅದನ್ನು ಪಠಿಸುವವರಿಗೆ ಅದು ಗೊತ್ತಿಲ್ಲವೆಂದಿದ್ದಾನೆ.

೪. ಪರಮಾತ್ಮನ ಗುಣಗಳು.
೫. ಆತ್ಮ
೬. ವಾಯು
೭. ಜಗತ್ತುಗಳು ಅಥವಾ ಅವಸ್ಥಾ ಚತುಷ್ಟಯ
೮. ನೂರ್ ಅಥವಾ ಪ್ರಕಾಶ
೯. ಸಾಕ್ಷಾತ್ಕಾರ
೧೦. ಪರಮಾತ್ಮನ ನಾಮಗಳು
೧೧ ಸಿದ್ಧರು
೧೨ ದಿಕ್ಕುಗಳು
೧೩ ಸೃಷ್ಟಿ (ಸಪ್ತಲೋಕ ಮತ್ತು ಭೂಗೋಲವನ್ನು ಇಲ್ಲಿ ವಿವರಿಸಿದೆ )
೧೪ ಮಹಾಪ್ರಳಯ ( ಇಲ್ಲಿ ಯುಗಮಾನವನ್ನು ನಿರ್ದೇಶಿಸಲಾಗಿದೆ. )
೧೫ ಮೋಕ್ಷ.

ಇಲ್ಲಿ ಜೀವನ್ಮುಕ್ತಿ ಹಾಗು ವಿದೇಹ ಮುಕ್ತಿಗಳನ್ನೂ ವಿರಾಟ್ಪುರುಷನನ್ನೂ ಗಂಗಾ ಯಮುನಾ ಸರಸ್ವತಿ ಎಂಬ ತ್ರಿನದಿಗಳ ಸಮಾನವಾದ ಇಡಾ ಪಿಂಗಲಾ ಸುಷುಮ್ನಾ ಎಂಬ ತ್ರಿನಾಡಿಗಳನ್ನೂ ವಿಸ್ತರಿಸಲಾಗಿದೆ.

೧೬. ದಿವಾ– ರಾತ್ರಿ-ಕಾಲಗಳು.

## ಶಾಂತಿ ಸಂದೇಶ

ಈ ಗ್ರಂಥದ ಅಧ್ಯಂತವೂ ದಾರಾನು ಹಿಂದೂ ಧರ್ಮದ ಎಲ್ಲ ಹಿರಿಕಿರಿ ಅಂಗಗಳಲ್ಲಿ ಸೂಕ್ಷ್ಮನಾಗಿದ್ದುದು ಸ್ಪಷ್ಟವಾಗುತ್ತದೆ. ಅವನ ವಿದ್ವತ್ತೆಗಿಂತಲೂ ಸಿದ್ಧಾವಸ್ಥೆಯಿಂದ ಹುಟ್ಟಿದ ಅವನ ಆಳವಾದ ಅರಿವು ತೋರುತ್ತದೆ. ವೈದಿಕ ಧರ್ಮ ಸಿಂಧುವನ್ನು ದೇವದಾನವರಂಥ ಸದಸತ್ ಚಿತ್ತವೃತ್ತಿಗಳಿಂದ ಬುದ್ಧಿಮಂಥದವನ್ನು ಪಯೋಗಿಸಿ ಕಡೆದು ದೇವಾಸುರರು ಸಮುದ್ರಮಂಥನದಿಂದ ಸಂಪಾದಿಸಿದ ಚತುರ್ದಶ ರತ್ನಗಳಿಗಿಂತಲೂ ಅಮೂಲ್ಯವಾದರತ್ನವನ್ನು ತಾನು ಸಂಪಾದಿಸಿದುದಾಗಿ ಈ "ಸಂಗಮ" ಗ್ರಂಥದ ತುದಿಯಲ್ಲಿ ಅವನು ಹೇಳಿದ್ದು ಅಪ್ರಸ್ತುತ ಅತಿಪ್ರಶಂಸೆಯಲ್ಲ.

ದಾರಾನ ಶಾಂತಿ ಸಂದೇಶ ಇನ್ನಾದರೂ ಹಿಂದೂ ಮುಸ್ಲಿಮರಲ್ಲಿ ಸೌಹಾರ್ದವನ್ನು ತಂದಿತ್ತರೆ!

---

## ಗಾಂಧೀಜಿ ಭಾಷಣ

(ಆನೇ ಪುಟದಿಂದ)

ರಿಂದ ಕಲ್ಕತ್ತೆಗೆ ನಾನು ಭೆಟ್ಟಿ ಕೊಡುವೆನೆಂಬ ಕಲ್ಪನೆಯಿರಲಿಲ್ಲ. ನಾನು ಕಲ್ಕತ್ತೆಯ ವಿಷಯವಾಗಿ ಕೇಳಿದ ಸಂಗತಿಗಳಿಂದ ಅಲ್ಲಿಗೆ ನನ್ನಿಂದ ಏನಾದರೂ ಪ್ರಯೋಜನವಾದೀತೆಂದು ಭಾವಿಸುವಂತಾಯಿತು; ಮತ್ತು ನನಗೆ ಸಂಪೂರ್ಣ ಅಪಜಯವಾಯಿತೆಂದು ನಾನು ಹೇಳಲಾರೆ. ಕಲ್ಕತ್ತೆಯಲ್ಲಾದರೂ ನಾನು ಬಿಹಾರದ ಬಗ್ಗೆ ಕೆಲಸ ಮಾಡುತ್ತಿದ್ದೆ. ಏಕೆಂದರೆ ಉದ್ದೇಶವು ಒಂದೇ ಆಗಿತ್ತು. ಕಲ್ಕತ್ತೆಗೆ ಅಥವಾ ಬೇರೆಡೆಗೆ ಹೋದುದರಿಂದ ಬಿಹಾರ ಅಥವಾ ನೌಖಾಲಿಗಳನ್ನು ಹೊರತಳ್ಳಲಿಲ್ಲ. ಅನ್ನೇನೂ ಸಂಭಾವ್ಯವಿಲ್ಲದಿದ್ದರೂ ಮುಂದಾದರೂ ಕಲ್ಕತ್ತೆಗೆ ಹೋಗುವ ಸಂದರ್ಭ ಬೀಳಬಹುದು. ಇಷ್ಟೆ; ಅದು ನನ್ನ 'ಮಾಡು ಅಥವಾ ಮಡಿ ಎಂಬ ಕರ್ತವ್ಯದ ಕಾರ್ಯಕ್ಷೇತ್ರವನ್ನು ವಿಸ್ತರಿಸಿತು. ಒಂದು ಕಡೆಯಾದ ವಿಜಯದಿಂದ ಉಳಿದೆಲ್ಲ ಕಡೆಗಳಲ್ಲೂ ಜಯಪ್ರಾಪ್ತಿಯಾದೀತೆಂದು ತಿಳಿಯುತ್ತೇನೆ. ಭವಿಷ್ಯವಾದರೋ ದೇವರ ಕೈಯಲ್ಲಿದೆ!'

ತಾವಿಲ್ಲದಾಗ ಬಿಹಾರದಲ್ಲಾಗುತ್ತಿದ್ದ ಕೆಲಸಗಳ ವಿವರವನ್ನು ಗಾಂಧೀಜಿಯವರು ತಿಳಿದುಕೊಳ್ಳುತ್ತಿದ್ದರು. 'ಬಿಹಾರದ ಸಂಗತಿಗಳು ಮಂದಗತಿಯಿಂದ ಸಾಗಿವೆ. ಹುಚ್ಚು ಕೆಲಸಗಳನ್ನು ಮಾಡಿದಾಗ ಮಾತ್ರ ಬಿಹಾರಿಗಳು ಮಂದಗಾಮಿಗಳಾಗಿರಲಿಲ್ಲ. ಆದುದರಿಂದ ತಾವು ಮಾಡಿದ ತಪ್ಪನ್ನು ತಿದ್ದುವುದರಲ್ಲಿ ಅವರು ತಡ ಮಾಡಲು ಯಾವ ಕಾರಣವೂ ಇಲ್ಲ. ಮಳೆ ಬರುತ್ತಿದೆ. ಅವರು ಅವೇಳೆಯಲ್ಲಿ ಕೆಲಸ ಮಾಡತೊಡಗಿದ್ದಾರೆ. ಮಂತ್ರಿ ಮಂಡಲವು ಸಂತ್ರಸ್ತರ ಸಂರಕ್ಷಣೆಯ ಹೊಣೆಯನ್ನು ಅನ್ಸಾರಿ ಸಾಹೇಬರ ಕೈಗಿತ್ತಿದೆ ಮತ್ತು ಕೆಲಸ ಚೆನ್ನಾಗಿ ನಡೆಯುವದರ ಸಲುವಾಗಿ ಅಲ್ಪದಿನಗಳ ರಜೆಯ ಮೇಲೆ ಹೋದ ಜನರಲ್ ಶಹನವಾಜರು ತಡ ಮಾಡದೆ ಬಂದು ಕಾರ್ಯಕರ್ತನೊಡನೆ ಸೇರಿಕೊಳ್ಳುವರು. ಮುಸ್ಲಿಮ ಸ್ತ್ರೀಯರೊಡನೆ ಕೆಲಸ ಮಾಡಲು ಸೇವಾಪ್ರೇಮಿಗಳಾದ ಸಾಕಷ್ಟು ಸಶಕ್ತ ಹೆಂಗಸರು ಮುಂದೆಬಂದರೆ ಕಾರ್ಯವು ಮುಂದುವರಿದೀತೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಮುಸಲ್ಮಾನರಲ್ಲಿ ನಂಬಿಗೆ ಹುಟ್ಟಿಸುವುದರಲ್ಲಿ ಬಿಹಾರವು ಶಕ್ತವಾದರೆ ಅದರ ಪ್ರಭಾವವು ಇಡಿಯ ಭರತಖಂಡದಲ್ಲೆಲ್ಲ ಪಸರಿಸುವುದು ಅನಿವಾರ್ಯವಾದೀತು. ಮುಸಲ್ಮಾನರನ್ನು ಹೊಗಳಿ ಅವರನ್ನು ಆರಾಧಿಸಬೇಕೆಂದು ನೀವು ನಿರೀಕ್ಷಿಸುವಿರೋ? ಎಂದು ನನಗೆ ಕೆಲವು ಹಿಂದುಗಳು ಪತ್ರ ಬರೆದಿದ್ದಾರೆ. ಸತ್ಯ ಅಹಿಂಸೆಗಳಂತಹ ಜೀವನ ಪಥ ತೋರಿದುದಂಥ ನಾನು ಅದನ್ನು ಎದುರಿಸಲಾರದೆ ಹೋದೆ. ಸಿಟ್ಟು ಮತ್ತು ಹಗೆತನವೆಂಬ ದುರ್ಗುಣಗಳನ್ನು ಅವರು ಬಿಟ್ಟುಬಿಡಬೇಕೆಂದು ನನ್ನ ಇಚ್ಛೆ. ಬಿರುಸುತನವನ್ನು ಬಿಡುವುದು ಮತ್ತು ಗಂಭೀರತೆಯಿಂದ ನಡೆಯುವುದು ಇದಕ್ಕೆ ಹೊಗಳುಭಟ್ಟತನವೆಂದು ಕರೆಯಬಹುದಾದರೆ ಆ ಶಬ್ದವನ್ನು ಬಳಸಲು ನಾನು ಹಿಂದೆಗೆಯುವುದಿಲ್ಲ. ಕೊನೆಯದಾಗಿ ಈ ಬಿಸಿಲಲ್ಲಿ ನಾನು ಎಲ್ಲ ಸ್ಥಳಗಳನ್ನೂ ಸಂಚರಿಸುವ ಪ್ರಯಾಸವನ್ನು ಸಹಿಸಲಾರೆ. ಪ್ರತಿ ದಿನ ಬೇರೆ ಬೇರೆ ಸ್ಥಳಗಳಲ್ಲಿ ಪ್ರಾರ್ಥನಾಸಭೆ ನಡೆಸುವುದರಲ್ಲೇ ನಾನು ಸಂತುಷ್ಟನಾಗಬೇಕಾಗಿದೆ.'

೧೭–೫–೪೭

ದಿನಾಪುರ [ಪಾಟ್ನಾ]

ಈ ದಿನ ಸಂಜೆ ಪ್ರಾರ್ಥನಾ ಸಭೆಯನ್ನುದ್ದೇಶಿಸಿ ಗಾಂಧೀಜಿಯವರು ಭಾಷಣ ಮಾಡಲಿಲ್ಲ. ಏಕೆಂದರೆ, ಬಹಳವಾಗಿ ಸೇರಿದ ಹೆಂಗಸರು ಮಕ್ಕಳ ದೆಸೆಯಿಂದ ಅಲ್ಲಿ ನಿಶ್ಶಬ್ದತೆ ಇರಲಿಲ್ಲ. ಪ್ರಾರ್ಥನಾ ಸಭೆಯಲ್ಲಿ ಬಹುಮಂದಿ ಕಿಕ್ಕಿರಿದು ಸೇರಿದ್ದರು. ಮತ್ತೆ ಮತ್ತೆ ಗಂಡಸರೂ ಹೆಂಗಸರೂ ಬಂದು ಬಂದು ಕೂಡುತ್ತಿದ್ದರು. ತಾವು ಹೇಳಬೇಕಾದುದನ್ನು ಅವರು ಕೇಳುವಂತೆ ಮಾಡುವ ಪ್ರಯತ್ನದಲ್ಲಿ ತಾವು ಸೋತೆವೆಂದು ತಮಗೆನಿಸಿತೆಂದು ಗಾಂಧೀಜಿಯವರೆಂದರು. ಆ ಬಗ್ಗೆ ಅವರು ವಿಷಾದಪಟ್ಟರು. ಅವರನ್ನುದ್ದೇಶಿಸಿ ಮಾತನಾಡದೆ ತಾವು ಪ್ರಾರ್ಥನಾ ಸ್ಥಳವನ್ನು ಬಿಟ್ಟು ಹೋಗುವುದಾಗಿ ಅವರು ಹೇಳಿದರು.

---

ಯಮುನಾನದಿಯ ದಂಡೆಯ ಮೇಲೆ ಹಿಂದುಸ್ತಾನದ ಎಲ್ಲ ಭಾಗಗಳಿಂದ ಬಂದಿದ್ದ ಸಾಧುಗಳು ಸಾ. ೨೪ ರಿಂದ ಹಿಂದುಸ್ತಾನ ಸರಕಾರದ ವಿರುದ್ಧ ಪ್ರತ್ಯಕ್ಷ ಹೋರಾಟ ಹೂಡಿದರು. ಈಗಾಗಲೆ ೧೫ ಸಾಧುಗಳ ಬಂಧನವಾಗಿದೆ. ದೇಶದ ವಿಭಜನೆ ಮಾಡಬಾರದು ಮತ್ತು ಗೋವಧ ಪ್ರತಿಬಂಧಕ ಉಪಾಯಗಳನ್ನು ಯೋಜಿಸಬೇಕು ಎಂಬ ತಮ್ಮ ಬೇಡಿಕೆಗಳನ್ನು ಸರಕಾರವು ಮನ್ನಿಸದಿದ್ದರೆ ಹನ್ನೆರಡು ಹನ್ನೆರಡು ಸಾಧುಗಳ ತಂಡವು ಸತ್ಯಾಗ್ರಹ ಮಾಡಿ ಬಂಧನಕ್ಕೆ ಒಳಗಾಗುತ್ತಿರುವರು

## ನಾಲ್ಕು ಮಾತು

(೭ನೇ ಪುಟದಿಂದ)

ಅಷ್ಟೇ ಮಹತ್ವದ್ದಿರುವದು. ಈ ವಿಷಯಕ ಜಾಗೃತಿಯೂ ಅತಿ ಮಹತ್ವದ್ದಿರುವದು.

### ವರ್ಗ ಕಲಹ

ಗಾಂಧೀವಾದ, ಕಮ್ಯುನಿಝಂ ಅಥವಾ ಸಮತಾವಾದ ಮತ್ತು ಸಮಾಜವಾದ (ಸೋಶಾಲಿಝಂ) ಇವುಗಳಲ್ಲಿ ವರ್ಗ ಕಲಹವನ್ನು ಕುರಿತು ಇದ್ದ ದೃಷ್ಟಿಭೇದವನ್ನು ಸೂಕ್ಷ್ಮವಾಗಿ ತಿಳಿದುಕೊಳ್ಳುವದು ಅತ್ಯವಶ್ಯವು. ಯಾಕಂದರೆ ನೈಸರ್ಗಿಕವಾಗಿ ಇರುವ ವರ್ಗ ಕಲಹ ಇಲ್ಲೇ ಇಲ್ಲ ಎಂದು ಗಾಂಧೀವಾದಿಗಳು ಸಾಧಿಸಲೆತ್ನಿಸುವರು ಎಂದು ಅವರ ಮೇಲೆ ಒಂದು ಮುಖ್ಯ ಆಕ್ಷೇಪ. ಎಂಥ ಸಮಾಜವನ್ನು ಕಟ್ಟಿದರೂ ಅದರಲ್ಲಿ ವರ್ಗಗಳೆಂಬುವು ಇದ್ದೇ ತೀರುವವು. ವ್ಯಕ್ತಿ ವ್ಯಕ್ತಿಗಳಲ್ಲಿ ಅತ್ಯಂತಿಕ ಸಮತೆ ಎಂಬುದು ಅಸಾಧ್ಯವಾದ ಮಾತು. ಒಂದೇ ಪಡಿಯಚ್ಚಿನಲ್ಲಿ ಹೊಯ್ದಂತೆ ಎಲ್ಲ ವ್ಯಕ್ತಿಗಳು ಶರೀರ,ಮನಸ್ಸು, ಬುದ್ಧಿ, ಆತ್ಮ ಈ ನಾಲ್ಕೂ ವಿಷಯಗಳಲ್ಲಿ ಒಂದೇ ಸಮ ಹುಟ್ಟಿ ಒಂದೇ ಸಮ ಬೆಳೆಯುತ್ತ ಹೋದರೆ ಮಾತ್ರ ಅತ್ಯಂತಿಕ ಸಮತೆ ತಲೆದೋರಬಹುದು! ಆದರೆ ಈಗ ಸಮೀಪದಲ್ಲಿ ಹಾಗೇನೂ ಆಗುವಂತೆ ತೋರಲಿಲ್ಲ. ಅಂದ ಬಳಿಕ ಈ ನೈಸರ್ಗಿಕ ಅಸಮಾನತೆಯೆ ಸಮಾಜದಲ್ಲಿ ವರ್ಗ ನಿರ್ಮಾಣಕ್ಕೆ ಕಾರಣವಾಗುವದು. ಒಂದೊಪ್ಪತ್ತು ಆರ್ಥಿಕ ಅಸಮಾನತೆಯನ್ನವಲಂಬಿಸಿದ ವರ್ಗಗಳು ಹೋದರೂ ಬೌದ್ಧಿಕ, ಅಧಿಕಾರ ವಿಷಯಕ ಅಸಮಾನತೆಯನ್ನವಲಂಬಿಸಿದ ವರ್ಗಗಳು ನಷ್ಟವಾಗಲಾರವು. ಇರಲಿ. ಈಗ ವರ್ಗಗಳಿದ್ದೇ ಇರುವವೆಂದ ಬಳಿಕ ವರ್ಗ ವಿರೋಧವು ಇದ್ದೇ ತೀರುವದೆಂಬ ಮಾತನ್ನು ನಾನು ಒಪ್ಪುವೆನು. ಒಂದೇ ಕುಟುಂಬದಲ್ಲಿ ತಂದೆ ಮಕ್ಕಳಲ್ಲಿ ಕೂಡ ವಿರೋಧವಿರುವದು. ಆದರೆ ಆ ವಿರೋಧವು ಯಾವ ಬಗೆಯದ್ದಿರುವದೋ ಅದೇ ಬಗೆಯ ವಿರೋಧವು ಸಮಾಜದ ವರ್ಗಗಳಲ್ಲಿರುವದು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂದರೆ ಸಾಮೋಪಚಾರದಿಂದಲೂ ಸಮಂಜಸ ಸಹಕಾರದಿಂದಲೂ ಅಹಿಂಸಾಯುಕ್ತ ಸತ್ಯಾಗ್ರಹದಿಂದಲೂ ಆ ವಿರೋಧವನ್ನು ಸರಿಪಡಿಸಿಕೊಂಡು ತಂದೆ ಮಕ್ಕಳಿಬ್ಬರೂ ಒಂದೇ ಕುಟುಂಬದಲ್ಲಿ ಪರಸ್ಪರರ ನಾಶಮಾಡದೆ ಇಬ್ಬರ ಹಿತವನ್ನೂ ಸಾಧಿಸಲು ಬರುವಂತಹ ಪರಿಸ್ಥಿತಿ ಇರುವದು. ವರ್ಗ ವಿರೋಧವಿದ್ದಾಕ್ಷಣಕ್ಕೆ ಅತ್ಯಂತಿಕ ಹಿತ ವಿರೋಧ ಇದ್ದೇತೀರಲಿಕ್ಕೆಬೇಕೆಂಬ ಸಿದ್ಧಾಂತವಿಲ್ಲ. ವರ್ಗ ವಿರೋಧವಿದ್ದಾಕ್ಷಣಕ್ಕೆ ವರ್ಗ ಕಲಹವನ್ನು ಹೂಡಿ ವರ್ಗ ವಿದ್ರೋಹವನ್ನು ವಿಕೋಪಕ್ಕೆ ಒಯ್ದು ವರ್ಗ ನಿರ್ಮೂಲನದಲ್ಲಿ ಅದರ ಪರಿಣತಿಯಾಗುವಂತೆ ಮಾಡುವದು ಕ್ರಮಪ್ರಾಪ್ತವೆಂದು ನಾನು ತಿಳಿಯಲಾರೆ. ಇದು ದ್ವೇಷದ ಹಾಗೂ ಹಿಂಸೆಯ ಮಾರ್ಗವು. ಇದು ಸಮಾಜದ ಅತ್ಯಂತಿಕ ಹಿತವನ್ನು ಸಾಧಿಸಲಾರದು. ಒಮ್ಮೊಮ್ಮೆ ತಾತ್ಕಾಲಿಕ ಹಿತವಾದಂತೆ ಕಂಡರೂ ಕೊನೆಗೆ ಅದು ಹೆಚ್ಚಿನ ದ್ವೇಷ, ಹೆಚ್ಚಿನ ಕೊಲೆ ಸುಲಿಗೆ ಇವುಗಳಲ್ಲಿಯೆ ಪರಿಣಮಿಸುವದು. ಈ ದೃಷ್ಟಿಭೇದದ ರಹಸ್ಯವನ್ನು ನಾವು ತಿಳಿದುಕೊಂಡರೆ ವರ್ಗ ನಿರ್ಮೂಲನ ಮಾಡದೆ ವರ್ಗ ವಿರೋಧವನ್ನು ಸರಿಪಡಿಸುವ ಮಾರ್ಗವು ನಮಗೆ ಗೊತ್ತಾಗಬಲ್ಲದು.

### ಪಾಕಿಸ್ತಾನದ ಪ್ರಗತಿ

ಪಾಕಿಸ್ತಾನದ ಬೇಡಿಕೆಯು ಬಾಲಾಗಸಿ ಉದ್ದಕ್ಕೆ ಹಾಗೆಯೆ ಬೆಳೆಯುತ್ತ ಹೋಗುವದೆಂದು ನಾನು ಹೇಳಿದ ಭವಿಷ್ಯವು ಈಗ ನಿಜವಾಗುತ್ತ ನಡೆದಿದೆ. ಮುಂಬೈ ಪ್ರಾಂತದಲ್ಲಿಯೂ ಒಂದು ಪಾಕಿಸ್ತಾನವು ಬೇಕು ಎಂದು ಮುಂಬೈ ಮುಸ್ಲಿಂಲೀಗಿನವರು ಬೇಡಿಕೆ ಮಾಡಿರುವರು. ಊರೂರಿಗೂ ಒಂದು ಪಾಕಿಸ್ತಾನವಿರಬೇಕು, ಸ್ವತಂತ್ರ ರಾಜ್ಯವಿರಬೇಕು, ' ಎಂದು ಲೀಗಿನವರು ಬೇಡಿಕೆ ಮಾಡಿದರೆ ಆಶ್ಚರ್ಯವಿಲ್ಲ! ಹೈದ್ರಾಬಾದ ಸಂಸ್ಥಾನದಲ್ಲಿಯ ೧೫೦ ಲಕ್ಷ ಹಿಂದುಗಳೆಲ್ಲರೂ ಹೊರಗೆ ಹೋಗಬೇಕು, ದಕ್ಷಿಣ ಹಿಂದುಸ್ತಾನದಲ್ಲಿಯ ಸುಮಾರು ೪೦ ಲಕ್ಷ ಮುಸ್ಲಿಮರು ಅಲ್ಲಿ ಸೇರಿ ಅದನ್ನೊಂದು ಪಾಕಿಸ್ತಾನ ಮಾಡಬೇಕು, ಎಂಬ ಬೇಡಿಕೆಯೂ ಈಗ ಪ್ರಕಟವಾಗಿದೆ. ಯಾಕಾಗಬಾರದು ? ಮೂಲತಳಹದಿಯೆ ಸೊಟ್ಟವಿದ್ದ ಮೇಲೆ ಮೇಲಿನ ಕಟ್ಟಡವೆಲ್ಲ ಅದೇ ಬಗೆಯದಾಗುವದು ಸ್ವಾಭಾವಿಕ. ತಮ್ಮ ಧರ್ಮಸಂಸ್ಕೃತಿ ಇವು ಹಿಂದುಗಳಿಂದ ತೀರ ಭಿನ್ನ,ಪ್ರತಿಧರ್ಮಕ್ಕೂ ಜಾತಿಗೂ ಒಂದು ಪ್ರತ್ಯೇಕ ಮಾತೃಪ್ರದೇಶವಿರಬೇಕು (ಹೋಮಲ್ಯಾಂಡ), ಪ್ರತಿ ಧರ್ಮದವರಿಗೂ ಜಾತಿಯವರಿಗೂ ಒಂದು ಸ್ವತಂತ್ರ ರಾಜ್ಯವಿರಬೇಕು, ಎಂದು ಪ್ರತಿಪಾದನೆ ಮಾಡುತ್ತ ಹೋದರೆ ಅದರ ಪರಿಣಾಮವು ಮನೆಮನೆಗೂ ಪಾಕಿಸ್ತಾನವಿರಬೇಕು ಎಂದೇ ಆಗಬಲ್ಲದು! ಎರಡು ಎರಡು ಕೂಡಿಸಿದರೆ ನಾಲ್ಕು ಆಗುವದು ಎಷ್ಟು ನಿಶ್ಚಿತವೋ ಅಷ್ಟೇ ಈ ಪಾಕಿಸ್ತಾನದ ಬೇಡಿಕೆ ಹುಚ್ಚೆದ್ದು ಕುಣಿಯುವದು ಸ್ವಾಭಾವಿಕ. ಈಗಲಾದರೂ ಹೆಚ್ಚು ಸಮಂಜಸತನ, ವಿಚಾರ, ವ್ಯವಹಾರ ಇವು ಲೀಗಿನವರಿಗೆ ಹೊಳೆಯುವ ವೇಳೆ ಬಂದಿಲ್ಲವೆ ?

### ಭಟಕಳ ಬಂದರ

ಕರ್ನಾಟಕಕ್ಕೊಂದು ಒಳ್ಳೆ ಬಂದರ, ಕರಾವಳಿಯ ಗುಂಟ ಒಂದು ರೇಲು ದಾರಿ, ಸಾಕಷ್ಟು ವಿದ್ಯುಚ್ಛಕ್ತಿಯ ಪೂರೈಕೆ ಈ ಮೂರು ಮಾತುಗಳು ಕರ್ನಾಟಕದ ಪ್ರಗತಿಗಾಗಿ ಅತ್ಯವಶ್ಯವೆಂಬುದು ಸೂರ್ಯನಂತೆ ಸ್ಪಷ್ಟವಿರುವದು. ಅವುಗಳಲ್ಲಿ ಬಂದರದ ವಿಷಯ ಸ್ವಲ್ಪ ಮುಂದುವರಿಯುತಿರುವದು. ಸಂತೋಷದ ಸಂಗತಿ. ಕರ್ನಾಟಕದ ಮಟ್ಟಿಗಾದರೂ ಎಲ್ಲರೂ ಏಕಕಂಠದಿಂದ ಈ ಬಂದರದ ವಿಷಯದಲ್ಲಿ ಹಟ ಹಿಡಿಯುವದು ಅತ್ಯವಶ್ಯವು. ನಮ್ಮಲ್ಲಿ ಇನ್ನೂ ಹಲವರು ಕಾರವಾರ ಬಂದರವಾಗಬೇಕೆಂದು ಬಿಡುಕುತಿರುವರು. ಅದೂ ಒಂದು ಮುಂದೆ ಚಿಕ್ಕಬಂದರವಾಗಬಹುದು. ಅಲ್ಲಿ ನೈಸರ್ಗಿಕ ಸೋಯಿಗಳು ಹಲವು ಇರಬಹುದು. ನಿಸರ್ಗಸೌಂದರ್ಯವೂ ಅಲ್ಲಿ ಹೆಚ್ಚು ಇದೆ. ಆದರೆ ದೊಡ್ಡ ಬಂದರದ (ಮೇಜರ ಪೋರ್ಟ) ಪ್ರಶ್ನೆ ಬಂದಾಗ ಭಟಕಳ ಬಿಟ್ಟು ಕಾರವಾರದ ಹೆಸರು ಜಾಚುವದು ಸಮಂಜಸವಲ್ಲ, ಜಾಣತನದ್ದಲ್ಲ, ವ್ಯವಹಾರ ಕುಶಲತೆಯದಲ್ಲ. ಮೈಸೂರನ್ನೊಳಗೊಂಡು ಇಡೀ ಕರ್ನಾಟಕಕ್ಕೆ ಒಂದೇ ಒಂದು ದೊಡ್ಡ ಬಂದರವು (ಮೇಜರಪೋರ್ಟ) ಈಗ ಸಿಕ್ಕಬಲ್ಲದು. ಅದು ಯಾವದಿರಬೇಕು ಎಂಬ ಪ್ರಶ್ನೆ ನಮ್ಮೆದುರಿಗಿದೆ. ಭಟಕಳವೇ ಅಂಥ ಬಂದರವಾಗಬಲ್ಲದೆಂಬುದು ನಿರ್ವಿವಾದವು. ಆದುದರಿಂದ ಈಗ ಆ ಬಗ್ಗೆ ಬುದ್ಧಿಭೇದವನ್ನು ಮಾಡುವ ಗೋಜಿಗೆ ಹೋಗದೆ ಎಲ್ಲ ಕನ್ನಡಿಗರೂ ಏಕಕಂಠದಿಂದ ಭಟಕಳ ಬಂದರದ ಬೇಡಿಕೆಯನ್ನೆ ಮುಂದರಿಸುವದು ಯೋಗ್ಯವೆಂದು ನನ್ನ ನಂಬಿಗೆ.




### ಧಾರವಾಡ

ಧಾರವಾಡ ತಾಲೂಕ ಕಾಂಗ್ರೆಸ ಕಮೀಟಿಯ ಸಾಧಾರಣ ಸಭೆಯು ತಾ ೬ ನೆಯ ದಿನ ತಾ. ಕಾಂ. ಕಚೇರಿಯಲ್ಲಿ ಶ್ರೀ ಕುರ್ತಕೋಟಿಯವರ ಅಧ್ಯಕ್ಷತೆಯಲ್ಲಿ ಸೇರಿತ್ತು. ೩೦ ಸದಸ್ಯರು ಬಂದಿದ್ದರು. ಮೊದಲು ಕಾರ್ಯದರ್ಶಿಗಳು ಈ ವರೆಗಿನ ವರದಿ ಹಾಗು ಲೆಕ್ಕ ಪತ್ರಗಳನ್ನು ಸಭೆಯ ಮುಂದಿಟ್ಟರು.

ಶ್ರೀ ಮರಿತಮ್ಮಪ್ಪನವರ ನಿಧನಕ್ಕಾಗಿ ದುಃಖ ಪ್ರದರ್ಶಿಸುವ, ಹಳ್ಳಿಗರು ಎತ್ತುವಳಿ ಕೊಡಲು ವಿನಂತಿಸುವ, ಅಣೆವಾರಿಯ ಪುನರ್ವಿಚಾರಣೆಯಾಗಬೇಕೆಂಬ ಗೊತ್ತುವಳಿಗಳಾದವು.

ತಾ ೧೨ ರಲ್ಲಿ ಧಾರವಾಡ ಜಿಲ್ಲಾ ಮ್ಯಾಜಿಸ್ಟ್ರೇಟರು ಕೆಳಗಿನ ಪ್ರಕಟನೆ ಹೊರಡಿಸಿದ್ದಾರೆ: 'ವಾಸಿಸುವ ಹಳ್ಳಿಗಳಿಗಿಂತ ಬೇರೆ ಹಳ್ಳಿಗಳಲ್ಲಿ ಸ್ವಂತ ಹೊಲಗಳಿದ್ದವರು ಅಥವಾ ಸ್ವತಃ ಅವುಗಳನ್ನು ಸಾಗುವಳಿ ಮಾಡುವವರು ವರ್ಷಕ್ಕೆ ತಮ್ಮ ಕುಟುಂಬಕ್ಕೆ ಸೀದಾ ಪ್ರಕಾರ ಸಾಲುವಷ್ಟು ಆಹಾರ ಧಾನ್ಯಗಳನ್ನು ಒಯ್ಯಬಯಸುತ್ತಿದ್ದರೆ ಹೊಲಗಳಿರುವ ಭಾಗದ ಮಾಮಲೇದಾರ ಇಲ್ಲವೆ ಮಹಾಲಕರಿಯವರಿಗೆ ಅರ್ಜಿ ಮಾಡಿಕೊಳ್ಳಬೇಕು. ಅವರು ಮೊದಲು ಲೇವಿ ಭತ್ತದ ಬೇಡಿಕೆ ಪೂರೈಸಿ ತಾವು ವಾಸಿಸುವ ಭಾಗದ ಸೀದಾ ಅಧಿಕಾರಿ ಇಲ್ಲವೆ ಮಾಮಲೇದಾರ ಅಥವಾ ಮಹಾಲಕರಿಯ ಮುಖಾಂತರ ತಮ್ಮ ಹೊಲಗಳಿರುವ ಭಾಗದ ಮಾಮಲೇದಾರ ಇಲ್ಲವೆ ಮಹಾಲಕರಿಗೆ ಅರ್ಜಿ ಕಳಿಸತಕ್ಕದ್ದು.'

ತಾ ೧೩ ರಲ್ಲಿ ಹುಬ್ಬಳ್ಳಿಯಲ್ಲಿ ರಾವಸಾಹೇಬ ಗಣಪತರಾವ ಮಡ್ಡಿಮನರ ನಿಧನ ಕುರಿತು ಅಲ್ಲಿಯ ಪೆಟ್ರೋಲ ಮಾರಾಟ ಸಂಘದವರು ತಮ್ಮಣ್ಣಪ್ಪ ಕೌಸಾಳಿಯವರ ಅಂಗಡಿಯಲ್ಲಿ ಸಭೆ ಸೇರಿ ದುಃಖ ಪ್ರದರ್ಶಿಸಿದ್ದಲ್ಲದೆ ಸಂಜೆ ೪ ರಿಂದ ೫ ರವರಿಗೆ ಪೆಟ್ರೋಲ ಪಂಪುಗಳನ್ನು ಬಂದು ಇಟ್ಟಿದ್ದರು. ಮೃತಾತ್ಮರು ಕಳೆದ ೭ ವರ್ಷಗಳಿಂದ ಸಂಘದ ಅಧ್ಯಕ್ಷರಿದ್ದರು. ಇದರಂತೆ ವ್ಯಾಪಾರಿವಾಹನ ಮಂದಿರದವರು, ಹತ್ತಿ ಅರಳಿ ದಲಾಲಿ ಸಂಘದವರು ಮತ್ತು ಆರ್ಯ ಸಮಾಜದವರು ಸಭೆ ಸೇರಿ ದುಃಖ ಪ್ರದರ್ಶನ ಮಾಡಿ ಮೃತರ ಆತ್ಮಕ್ಕೆ ಶಾಂತಿಯನ್ನು ಕೋರಿದರು.

ಹುಬ್ಬಳ್ಳಿಯ ಸಮಾಜವಾದಿ ಪಕ್ಷದ ಕಾರ್ಯಾಲಯದಲ್ಲಿ ದಿನಾಂಕ ೧೪ಕ್ಕೆ ಸಮಾಜವಾದಿ ಪಕ್ಷದ ಕರ್ನಾಟಕ ಶಾಖೆಯ ಕಾರ್ಯಕಾರಿ ಸಮಿತಿಯ ಸಭೆ ಸೇರಿತ್ತು. ಶ್ರೀಮತಿ ಕಮಲಾದೇವಿಯವರು ಅಧ್ಯಕ್ಷತೆ ವಹಿಸಿದ್ದರು. ಸಭೆಯಲ್ಲಿ ಪ್ರಾಂತದಲ್ಲಿ ಪಕ್ಷದ ಕಾರ್ಯಕರ್ತರು ನಡೆಸಿರುವ ಕಾರ್ಯ ಕಲಾಪಗಳ ವಿಮರ್ಶೆಯಾಗಿ ಮುಂದಿನ ೩ ತಿಂಗಳ ಕಾರ್ಯದ ಯೋಜನೆ ಸಿದ್ಧಪಡಿಸಲಾಯಿತು. ಮತ್ತು ರೈತ ಹಾಗು ಕೂಲಿಕಾರರ ಕಾರ್ಯಕರ್ತರ ಸಂಘಟನೆಗಳ ಸಲುವಾಗಿ ಉಪಸಮಿತಿಗಳನ್ನು ರಚಿಸಲಾಯಿತು. ಹೊಸವಾಗಿ ಹೊರಡಿಸಿದ 'ಜಾಗ್ರತಿ' ಪತ್ರಿಕೆಯನ್ನು ಶ್ರಮಜೀವಿಗಳ ಮುಖಪತ್ರ ಮಾಡುವದು ನಿಶ್ಚಿತವಾಗಿ ರೈತ ಹಾಗು ಕೂಲಿಕಾರರ ಕಾರ್ಯಕರ್ತರ ಸಭೆಗಳನ್ನು ಕರೆಯಬೇಕೆಂದೂ ಅವುಗಳಿಗೆ ರಮಾನಂದನ್, ಮಿಶ್ರ ಹಾಗೂ ಅಶೋಕ ಮೆಹತಾರವರನ್ನು ಆಮಂತ್ರಿಸಬೇಕೆಂದೂ ಗೊತ್ತಾಯಿತು.

### ಬೆಳಗಾವಿ

ಇಲ್ಲಿಯ ಅನಂತಶಯನ ಮಂದಿರದಲ್ಲಿ ನಡೆದಿರುವ ವಿಷ್ಣುಯಾಗ ಹಾಗು ಜ್ಞಾನ ಸತ್ರ ಕಾರ್ಯಕ್ಕೆ ನ್ಯಾಯಮೂರ್ತಿ ಲೋಕೂರರು ಭೆಟ್ಟಿ ಕೊಟ್ಟು ವಿಚಾರ ಪರಿಪ್ಲುತ ಭಾಷಣ ಮಾಡಿ ಸಂಸ್ಕೃತ ವಿದ್ಯಾವ್ಯಾಸಂಗದ ಭಾರತೀಯ ರೀತಿಯನ್ನು ಪಾಶ್ಚಾತ್ಯ ಪದ್ಧತಿಯೊಡನೆ ಹೋಲಿಸಿ ಧರ್ಮವನ್ನೂ ಸದ್ಯದ ರಾಜಕಾರಣವನ್ನೂ ಕೂಲಂಕಷವಾಗಿ ವಿವೇಚಿಸಿದರು. ಕೊನೆಗೆ ಅವರು ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳ ಮಹತ್ವವನ್ನು ತಿಳಿಸಿ ಹೇಳಿದರು. ಶ್ರೀ ಬುರ್ಲಿ ಶ್ರೀನಿವಾಸಾಚಾರ್ಯರು ಅತಿಥಿಗಳ ಆಭಾರ ಮನ್ನಿಸಿ ಯಾಗಕ್ಕಾಗಿ ಅವರು ೧೦೧ ರೂ. ಇತ್ತಿರುವದಾಗಿ ತಿಳಿಸಿದರು. ನ್ಯಾ. ಮೂ. ಲೋಕೂರರೊಡನೆ ಶ್ರೀಯುತರಾದ ದಾತಾರ ಬಳವಂತರಾಯರು ಹಾಗು ಮುಂಡಗಿ ವಕೀಲರು ಬಂದಿದ್ದು ಯಾಗದ ಮಹತ್ವ ತಿಳಿಸಿ ಕೊಟ್ಟರು.

ಮೇ ೧೫ ರಲ್ಲಿ ಪ್ರೊ. ಆರ್. ವಿ. ಜಾಗೀರದಾರರು ಕುಡಚಿಯಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ಮಾತನಾಡಿದರು. ಸಭೆಗೆ ಪ್ರಚಂಡ ಮುಸಲ್ಮಾನ ಜನಸಮೂಹ ನೆರೆದಿತ್ತು. ಸಭೆಯಲ್ಲಿ ಮುಸಲ್ಮಾನರು ಕರ್ನಾಟಕ ಏಕೀಕರಣಕ್ಕೆ ತಮ್ಮ ಹಾರ್ದಿಕ ಬೆಂಬಲವಿದೆಯೆಂದು ತಿಳಿಸಿದರು.

### ಉತ್ತರ ಕನ್ನಡ

ಭಟಕಳದಲ್ಲಿ ಹಡಗು ಕಟ್ಟುವ ಕಾರಖಾನೆಗಾಗಿ ಹಿಂದೀ ನೌಕಾ ಪಡೆಯ ಸಹಾಯ ಪಡೆದು ನೌಕಾ ನಿರೀಕ್ಷಣೆ ನಡೆಸಬೇಕೆಂದು ಮುಂಬಯಿ ಸರಕಾರವು ಶ್ರೀ ಎ. ಎಂ. ಭಟ್ಟರಿಗೆ ಅನುಮತಿಯಿತ್ತಿದೆ. ಕೇಂದ್ರ ಸರಕಾರದ ಶಿಫಾರಸಿನ ಮೇರೆಗೆ ಇದು ನಡೆದಿದೆ.

ಶ್ರೀ ಎ. ಎಂ. ಭಟ್ಟರು ಭಟಕಳದ ಔದ್ಯೋಗಿಕಾಭಿವೃದ್ಧಿಯ ಸಲುವಾಗಿ ಕೇಂದ್ರ ಮತ್ತು ಪ್ರಾಂತಿಕ ಸರಕಾರಗಳಿಗೆ ತಮ್ಮ ವಿಸ್ತೃತ ಯೋಜನೆಗಳನ್ನು ಸಾದರಪಡಿಸಿದ್ದರು. ಭಾರತದ ಅದ್ಭುತ ಯೋಜನೆಗಳಲ್ಲಿ ಟಾಟಾರವರ ಯೋಜನೆಯ ನಂತರ ಶ್ರೀ ಭಟ್ಟರ ಯೋಜನೆಗೆ ಸ್ಥಾನವಿದೆಯೆಂದು ಹೇಳುತ್ತಾರೆ. ನೌಕಾ ನಿರೀಕ್ಷಣೆಯಂಥ ಕಠಿಣ ಮತ್ತು ಗೂಢ ಕಾರ್ಯವನ್ನು ನಡೆಸಲು ಪ್ರಥಮ ಗೌರವ ದೊರೆತ ಹಿಂದೀಯರೆಂದರೆ ಶ್ರೀ ಭಟ್ಟರೆಂದೇ ಹೇಳಬಹುದು. ಭಟಕಳ ಬಂದರವನ್ನು ದೊಡ್ಡ ಬಂದರವನ್ನಾಗಿ ಅಭಿವೃದ್ಧಿಗೊಳಿಸಬೇಕೆಂದು ಸರಕಾರವು ಏಪ್ರಿಲ್ ೧೫ ಕ್ಕೆ ನಿರ್ಧರಿಸಿತು. ಆದರೆ ಅದಕ್ಕೆ ಮೊದಲು ಭಟಕಳದಲ್ಲಿ ಔದ್ಯೋಗಿಕ ಅಭಿವೃದ್ಧಿಯಾಗಬೇಕೆಂದು ಸರಕಾರದ ಕರಾರಿದೆ.

೧೯೧೮ ರಲ್ಲಿ ಮೈಸೂರ ಸರಕಾರವು ಭಟಕಳ ಬಂದರದ ನಿರೀಕ್ಷಣೆ ನಡೆಸಿದಾಗ ನೌಕಾಪಡೆಯ ಸಹಕಾರ ದೊರೆತಿರಲಿಲ್ಲ. ಈಗ ಶ್ರೀ ಭಟ್ಟರಿಗೆ ಆ ಸೌಕರ್ಯ ದೊರೆತಿದೆ. ಕೇಂದ್ರ ಸರಕಾರದ ನಿರ್ಣಯದ ಬೆಂಬಲವೂ ಇದರಿಗಿದೆ. ಅದ್ದರಿಂದ ಭಾರತದ ಪಶ್ಚಿಮ ಕರಾವಳಿಯಲ್ಲಿ ಪ್ರಥಮ ದರ್ಜೆಯ ಉತ್ತಮ ಬಂದರವೊಂದು ಬೇಗನೆ ನಿರ್ಮಿತವಾಗುವುದರಲ್ಲಿ ಸಂದೇಹವಿಲ್ಲ.

### ಬಿಜಾಪುರ

[illegible]

[illegible] ಸಹಾನುಭೂತಿಯಿಂದ ವಿಚಾರಿಸುವ [illegible] ಸನ ಕೊಟ್ಟರು.

ಶುಕ್ರವಾರ ಮುಂಜಾನೆ ಜಿಲ್ಲಾ [illegible] ಜನಾ ಪರಿಷತ್ತು ಮಂತ್ರಿಮಹೋದಯರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. [illegible] ಪ್ರಾಸ್ತಾವಿಕ ಭಾಷಣದಲ್ಲಿ ಪರಿಷತ್ತಿನ [illegible]ವನ್ನು ವಿಶದಪಡಿಸಿದರು. ಶ್ರೀ [illegible] ತಮ್ಮ ಭಾಷಣದಲ್ಲಿ ಮುಂಬಯಿ [illegible] ಯೋಜನೆಗಳನ್ನು ವಿವೇಚಿಸಿದರು. ಜಿಲ್ಲೆಯಲ್ಲಿಯ ಪುನರ್ರಚನೆಯ ಅಂಗಗಳಾದ [illegible], ಶೈಕ್ಷಣಿಕ, ಔದ್ಯೋಗಿಕ, ಸಹಕಾರ, [illegible] ವಿದ್ಯುತ್ಪೂರೈಕೆ, ಕೂಲಿಕಾರರ ಸಂರಕ್ಷಣೆ, ಸ್ಥಾನಿಕ ಸ್ವರಾಜ್ಯ ಮತ್ತು ಸಾಮಾಜಿಕ [illegible] ನೆಗಳು ಪರಿಷತ್ತಿನಲ್ಲಿ ಚರ್ಚಿಸಲ್ಪಟ್ಟವು. ಪರಿಷತ್ತಿಗೆ ಜಿಲ್ಲೆಯ ಬಹುತರ ಎಲ್ಲ ಭಾಗಗಳಿಂದಲೂ ಬಂದ ೪೦೦ ಪ್ರತಿನಿಧಿಗಳು ಹಾಜರಿದ್ದರು. ಅವರಲ್ಲಿಯ ಅನೇಕರು ಮಂತ್ರಿಗಳಿಗೆ ತಮ್ಮ ದೂರುಗಳನ್ನು ಹೇಳಿಕೊಂಡು ಸರಕಾರೀ ಯೋಜನೆಗಳು ಬೇಗನೆ ಕಾರ್ಯರೂಪಕ್ಕಿಳಿಯುವಂತೆ ಮಾಡಬೇಕೆಂದು ಬಿನ್ನವಿಸಿದರು. ಮಂತ್ರಿಗಳು ಸ್ಥಾನಿಕ ಕಾರ್ಯಕರ್ತರು ಸಂಘಟನೆಯ ಕಾರ್ಯವನ್ನು ಕೈಕೊಳ್ಳಬೇಕೆಂದು ಉಪದೇಶಿಸಿದರು.

### ಬಳ್ಳಾರಿ

ಹರಪನ ಹಳ್ಳಿಯ ಹಾಯಸ್ಕೂಲ ವಾರ್ಷಿಕೋತ್ಸವವು ದಿನಾಂಕ ೬ ರಲ್ಲಿ ಕೈಲಾಸ ನಗರದಲ್ಲಿ ವ್ಯಾಕರಣ ತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಜರುಗಿತು. ಪ್ರಧಾನೋಪಾಧ್ಯಾಯರಾದ ಶ್ರೀ ಅಲೂರ ವೆಂಕೋಬರಾಯರು ಶಾಲೆಯ ವರದಿಯನ್ನೋದಿದರು. ಅನಂತರ ಶ್ರೀಯುತರಾದ ಪಾದಿ, ಗುಂಡೂರಾಯರು, ಬಾದನಹಟ್ಟಿ ನರಸಿಂಗರಾಯರು ಹಾಗು ತಾಮ್ರಪರ್ಣಿ ರಾಘವೇಂದ್ರಾಚಾರ್ಯರ ನಿಧನ ಕುರಿತು ದುಃಖ ಪ್ರದರ್ಶಕ ಗೊತ್ತುವಳಿಯಾಗಿ ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ಉದ್ದೇಶಿಸಿ ಶ್ರೀ ಮತ್ತಿಹಳ್ಳಿ ರಾಘವೇಂದ್ರರಾಯರ ಭಾಷಣವಾಯಿತು.

ಇದೇ ದಿನ ಮುಂಜಾನೆ ಕೈಲಾಸಂ ನಗರದಲ್ಲಿ ಶ್ರೀ ವಿ. ಸೀತಾರಾಮಯ್ಯನವರ ಹಿರಿತನದಲ್ಲಿ ಯುವಜನ ಚರ್ಚಾ ಸಂಘದ ವಾರ್ಷಿಕೋತ್ಸವ ನಡೆಯಿತು. ಶ್ರೀ ವಿ. ಸೀ. ಯವರು ತಮ್ಮ ಭಾಷಣದಲ್ಲಿ ಇಂದಿನ ಕ್ರಾಂತಿಯುಗದಲ್ಲಿ ಅಂತಃಕಲಹಗಳಿಗೆ ಎಡೆಗೊಡದೆ ಸೌಹಾರ್ದ ಸಾಮರಸ್ಯ ಮೊದಲಾದ ಗುಣಗಳಿಂದ ಸಮಾಜದಲ್ಲಿ ನಾವು ನಡೆಯಬೇಕೆಂದೂ ಪೂರ್ವಜರು ತಮ್ಮ ತಂಗಿಗೆ ಹೇಳಿದಂತೆ ಪೂರ್ವಜರ ಜಾಣತನ, ಮಧ್ಯಯುಗದ ಶ್ರದ್ಧೆ, ಸದ್ಯದ ಯುಗದ ವಿಶಂಡವಾದ ಮತ್ತು ಭಾವೀ ಯುಗದ ವೈಭವಗಳನ್ನರಿತುಕೊಂಡು ಕಾಲಿಡಬೇಕೆಂದೂ ಹೇಳಿದರು.

### ಕನ್ನಡ ಸಂಸ್ಥಾನ

ಮೈಸೂರು ಸಂಸ್ಥಾನದ ಶಿಕ್ಷಣ ಹಾಗೂ ಆರೋಗ್ಯ ಮಂತ್ರಿಗಳಾದ ಶ್ರೀ ಟಿ. ಸಿ. ಎಂ. ರಾಯನರವರು ಶಿವಮೊಗ್ಗೆಗೆ ದಯಮಾಡಿಸಿದಾಗ ತಾ ೧೭ ರ ಮುಂಜಾನೆ ನಗರ ಸಭೆಯ ಪರವಾಗಿ ಅವರಿಗೆ ಮಾನಪತ್ರ ಅರ್ಪಿಸಲಾಯಿತು. ಕಾಂಗ್ರೆಸ್ಸಿನ ಒಬ್ಬ ಸಭಾಸದನೂ ಬಂದಿರಲಿಲ್ಲ. ಶ್ರೀ ಎಚ್. ಸುಂದರರಾಮ ಅಯ್ಯರರು ಮಾನಪತ್ರವನ್ನೋದಿದರು. ಇಂಟರ್ ಮೀಡಿಯಟ್ ಕಾಲೇಜನ್ನು ಫರ್ಸ್ಟ್ ಗ್ರೇಡ್ ಕಾಲೇಜನ್ನಾಗಿ ಮಾಡಬೇಕು, ಹರಿಜನರ ವಸತಿಗಳಿಗಾಗಿ ೫೦ ಸಾವಿರ ರೂಪಾಯಿಗಳ ಧನಸಹಾಯ ಕೊಡಬೇಕು ಮುಂತಾಗಿ ಅದರಲ್ಲಿ ಬೇಡಲಾಗಿತ್ತು. ಮಂತ್ರಿಗಳು ಬೇಡಿಕೆಗಳನ್ನೆಲ್ಲ ಸಹಾನುಭೂತಿಯಿಂದ ವಿಚಾರಿಸಲಾಗುವದೆಂದು ತಿಳಿಸಿದರು.

ಮಾಯಕೊಂಡದ ಪೌರಸಭೆಯ [illegible] ಯಲ್ಲಿ ೧೦ ಲೋಕನಿಯುಕ್ತ [illegible]

# 'ಕನ್ನಡಿಗರು ಆತ್ಮಲಾಘವವನ್ನು ಬಿಟ್ಟುಕೊಡಲಿ'

## ರೈತರೂ ಜಮೀನದಾರರೂ ಸಹಕರಿಸಬೇಕು

### ಕರ್ನಾಟಕ ಸಂಚಾರದಲ್ಲಿ ಮಾನ್ಯ ಮುರಾರಜಿಯವರ ಭಾಷಣಗಳು

'ಕಾಂಗ್ರೆಸ್ಸು ಈದೀಗ ಅಧಿಕಾರವನ್ನು ವಹಿಸಿದೆ. ಅಧಿಕಾರ ವಹಿಸಿದ ಕೂಡಲೆ ಸುಖ ಸೌಕರ್ಯಗಳು ದೊರೆಯುತಕ್ಕದ್ದೆಂದು ಬಯಸುವುದು ಸರಿಯಾಗಲಾರದು. ಒಂದೆರಡು ವರ್ಷಗಳಲ್ಲಿ ಆ ಬಗೆಯ ಸುಖ ಸೌಕರ್ಯ ಸಿಕ್ಕಲಾರವು. ೭೦—೮೦ ವರ್ಷಗಳ ವರೆಗೆ ಸತತ ಪರಿಶ್ರಮ ಪಟ್ಟರೆ ಸಾವೆಣಿಸಿದಂತೆ ಎಲ್ಲರೂ ಸುಖಸೌಕರ್ಯಗಳನ್ನು ಪಡೆಯಬಹುದು. ಈ ವಿಷಯವನ್ನು ಕಾಂಗ್ರೆಸ್ ಕಾರ್ಯಕರ್ತರು ತಿಳಿದುಕೊಳ್ಳಬೇಕಲ್ಲದೆ ಜನತೆಗೆಲ್ಲ ತಿಳಿಸಿ ಹೇಳಬೇಕು.' ಎಂದು ಮಾನ್ಯ ಗೃಹಮಂತ್ರಿ ಮುರಾರಜಿ ದೇಸಾಯರು ಹುಬ್ಬಳ್ಳಿಯಲ್ಲಿ ತಾ. ೧೭ ರಲ್ಲಿ ಕ. ಪ್ರಾಂತಿಕ ಕಾಂಗ್ರೆಸ್ ಕಾರ್ಯಕರ್ತರ ಸಭೆಯಲ್ಲಿ ಉಪದೇಶಿಸಿದರು. ಅವರ ಕರ್ನಾಟಕ ಸಂಚಾರ ಕಾಲಕ್ಕೆ ಕರ್ನಾಟಕದ ತೊಂದರೆಗಳನ್ನು ಹೇಳಲು ಈ ಸಭೆಯನ್ನು ಕೂಡಿಸಲಾಗಿತ್ತು. ಅವರು ಮುಂದುವರಿದು ಹೇಳಿದ್ದೇನೆಂದರೆ— 'ಅಧಿಕಾರಿಗಳಲ್ಲಿ—ನಮ್ಮಲ್ಲಿ ಹಿಂದೆ ವೈರವಿದ್ದಿರಬಹುದು. ಆದರೀಗ ಅವರೂ ನಾವೂ ಕೂಡಿ ಕೆಲಸ ಮಾಡಬೇಕಾಗಿದೆ. ಅವರು ಜನತೆಯ ಸೇವಕರು ಇರುವರು. ಆದರೆ ಪ್ರತಿಯೊಬ್ಬ ಕಾಂಗ್ರೆಸ್ಸಿಗನು ಅಲ್ಲವೆ ಕಾಂಗ್ರೆಸ ಸಮಿತಿಯು ಸೇವಕರಿಗೆ ಹೀಗೆ ತಿಳಿದುಕೊಂಡದ್ದಾದರೆ ಅಧಿಕಾರಿಗಳಿಗೆ ಆಡಳಿತವನ್ನು ಸಾಗಿಸುವದೇ ಕಠಿಣವಾಗಬಹುದು. ಕಾಂಗ್ರೆಸ್ ಕಾರ್ಯಕರ್ತರು ಅಧಿಕಾರಿಗಳಿಗೆ ಹೇಳುವುದನ್ನು ಬಗುಬಗೆಯಿಂದ ಹೇಳಬೇಕು. ಅಧಿಕಾರಿಗಳು ಎಲ್ಲವನ್ನೂ ಚೆನ್ನಾಗಿ ತಿಳಿದುಕೊಂಡು ಸೂಕ್ತವಾದುದನ್ನು ಮಾಡುವರು. ಅವರು ಯೋಗ್ಯ ರೀತಿಯಿಂದ ಕಾರ್ಯ ನಡಿಸದಿದ್ದರೆ ನೀವು ನಮಗೆ ಬರೆಯಬೇಕು. ನಾವು ಅವರಿಂದ ಕಾರ್ಯ ಮಾಡಿಸುವೆವು. ಕಾಂಗ್ರೆಸ್ ಮಂತ್ರಿಮಂಡಳವಿದ್ದರೂ ಇಡೀ ಪ್ರಾಂತದ ಜನತೆಯ ದೃಷ್ಟಿಯಿಂದ ಆಡಳಿತವನ್ನು ಸಾಗಿಸಬೇಕಾಗುತ್ತದೆ. ಕಾಂಗ್ರೆಸ್ಸಿಗರ ಹಿತವನ್ನಷ್ಟೇನೆ ನೋಡಿದರೆ ನಡೆಯದು. ಆದರೆ ಕಾಂಗ್ರೆಸ್ ಘೋಷಣಾ ಪತ್ರದಲ್ಲಿ ಅಭ್ಯಾಸಿಸಿದಂತೆ ಕಾಂಗ್ರೆಸ ಮಂತ್ರಿಮಂಡಳಗಳು ರಾಜ್ಯವಾಳುವವೋ ಇಲ್ಲವೋ ಎಂಬುದನ್ನು ಮಾತ್ರ ಕಾಂಗ್ರೆಸ್ಸಿಗರು ನೋಡಬೇಕು. ಕಾಂಗ್ರೆಸ್ಸಿನ ಶಕ್ತಿಯೆಂದರೆ ಜನತೆಯ ಶಕ್ತಿ—ಜನತೆಯಿಂದಲೆ ನಮಗೆ ಶಕ್ತಿ ಬರುತ್ತದೆ. ಅದುದರಿಂದ ನೀವೆಲ್ಲರೂ ಸರಕಾರದ ಕಾರ್ಯದಲ್ಲಿ ಸಹಾಯಮಾಡಿ ಕಾಂಗ್ರೆಸ್ಸಿನ ಧ್ಯೇಯವನ್ನು ಸಾಧಿಸಬೇಕು. ಈಗ ಹೊರಗಿನವರಿಗಿಂತ ನಮ್ಮವರಿಂದಲೆ ಹೆಚ್ಚು ತಡೆಯುಂಟಾಗುತ್ತದೆ. ಇದಕ್ಕೆ ಅವಕಾಶ ಕೊಡದಂತೆ ಎಲ್ಲರೂ ನೋಡಿಕೊಳ್ಳಬೇಕು' ಎಂದು ಮುಂತಾಗಿ ಹೇಳಿದರು.

"ಕರ್ನಾಟಕದ ಬಗ್ಗೆ ಮಂತ್ರಿಮಂಡಳ ಅಷ್ಟೊಂದು ಲಕ್ಷ್ಯ ಕೊಡುವುದಿಲ್ಲ. ಕರ್ನಾಟಕದಲ್ಲಿ ವಿದ್ಯುದ್ಯೋಜನೆ ನೀರಾವರಿ ಮೊದಲಾದವುಗಳ ಬಗ್ಗೆಯೂ ಗಮನಿಸುವದಿಲ್ಲ" ಎಂದು ಮುಂತಾಗಿ ಕೇಳಿದ್ದಕ್ಕೆ ಆ ಬಗ್ಗೆ ಪರಿಶೀಲನೆ ಮುಂತಾದವನ್ನು ನಡೆಸಲಾಗುತ್ತಿದೆಯೆಂದೂ ಕನ್ನಡಿಗರು ತಮ್ಮಲ್ಲಿದ್ದ ಆತ್ಮಲಾಘವವನ್ನು ಬಿಟ್ಟು ಕೊಟ್ಟು ಭಿಕ್ಷುಕರಂತೆ ಬೇಡದೆ ಸಮರ್ಥರಂತೆ ಹಕ್ಕಿನಿಂದ ಕಾರ್ಯವನ್ನು ಸಾಧಿಸಿಕೊಳ್ಳಬಹುದೆಂದರು.

#### ನಗರಸಭೆಗೆ ಶಿವಿಮಾಕು

ಹುಬ್ಬಳ್ಳಿಯ ನಗರ ಸಭೆಯ ವಿಷಯವಾಗಿ "ಈ ಹುಬ್ಬಳ್ಳಿಯ ನಗರ ಸಭೆಯ ಇತಿಹಾಸವು ನನಗೆ ಚೆನ್ನಾಗಿ ಗೊತ್ತಿದೆ. ಕೆಲವು ದಿವಸ ಇದು ನಾಗರಿಕರ ಕೈಬಿಟ್ಟು ಸರಕಾರದ ಆಡಳಿತಕ್ಕೆ ಒಳಪಟ್ಟದ್ದೂ ನನ್ನ ನೆನಪಿನಲ್ಲಿದೆ. ನಗರ ಸಭೆಯು ಸರಕಾರದ ಆಡಳಿತದಲ್ಲಿದ್ದಾಗ ಹೆಚ್ಚು ಸುಧಾರಣೆಗಳಾದವೆಂಬುದೂ ನನಗೆ ಗೊತ್ತಿದೆ. ಹೀಗಿದ್ದಲ್ಲಿ ತಪ್ಪು ಯಾರದೆಂಬುದು ಒಡೆದು ಹೇಳಬೇಕೆ?" ಎಂದು ಹುಬ್ಬಳ್ಳಿ ನಗರ ಸಭೆಯವರು ಸಮರ್ಪಿಸಿದ ಮಾನಪತ್ರಕ್ಕೆ ಉತ್ತರ ಕೊಡುತ್ತ ಹೇಳಿದರು.

ಹುಬ್ಬಳ್ಳಿಯಲ್ಲಿ ಜಾತೀಯ ಗಲಭೆಯಿಲ್ಲದುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿ ಕರ್ನಾಟಕವನ್ನು ದುರ್ಲಕ್ಷಿಸುವುದಿಲ್ಲವೆಂದು ಅವರು ಆಶ್ವಾಸನವಿತ್ತರು.

#### ಸರ್ವಧರ್ಮ ಸಮನ್ವಯ

ತಾ. ೧೯ ರಲ್ಲಿ ಶ್ರೀ ಮುರಾರಜಿಯವರು ನವಲಗುಂದಕ್ಕೆ ಭೆಟ್ಟಿಯಿತ್ತು ಅಲ್ಲಿನ ಸರ್ವ ಧರ್ಮ ಸಮನ್ವಯ ಸಂಘದ ಉದ್ಘಾಟನಮಾಡುತ್ತ 'ಸರ್ವಧರ್ಮಸಮನ್ವಯವು ನಮ್ಮಲ್ಲಿ ಮೊದಲಿಂದಲೂ ಇದ್ದದ್ದಾಗಿದೆ. ನಾವು ಇಂದು ಹಿಂದು, ಮುಸಲ್ಮಾನ, ಬ್ರಾಹ್ಮಣ, ಅಬ್ರಾಹ್ಮಣ, ಲಿಂಗಾಯತ, ಲಿಂಗಾಯತೇತರ ಎಂದು ಕಲಹಮಾಡುತ್ತ ಕೂತರೆ ಪಶುಗಳಿಗೂ ನಮಗೂ ಏನೂ ಭೇದ ಉಳಿಯುವದಿಲ್ಲ' ಎಂದರು. ದೇಸಾಯರ ವಾಡೆಯಲ್ಲಿ ಮಾತನಾಡುತ್ತ, 'ಈಗ್ಗೆ ಹಿಂದುಸ್ಥಾನವು ಸಂಕ್ರಮಣ ಕಾಲದಲ್ಲಿದೆ. ಜೀವನಾವಶ್ಯಕ ಪದಾರ್ಥಗಳಾದ ಆಹಾರ ಧಾನ್ಯ, ಅರಿವೆ ಮೊದಲಾದವುಗಳು ದುರ್ಲಭವಾಗಿವೆ. ಕಳ್ಳ ವ್ಯಾಪಾರ, ಲಂಚಗುಳಿತನ ಬೆಳೆದಿವೆ. ಹಿಂದುಸ್ಥಾನಕ್ಕೆ ಆಹಾರ ಧಾನ್ಯ ನಿರ್ಯಾತಮಾಡುವ ಬ್ರಹ್ಮದೇಶ ಮೊದಲಾದ ದೇಶಗಳು ಕಳೆದ ಮಹಾಯುದ್ಧದಲ್ಲಿ ಹಾಳಾಗಿಹೋದದ್ದರಿಂದ ಅಲ್ಲಿಂದ ಆಹಾರ ಧಾನ್ಯಗಳು ಬರದಂತಾಗಿವೆ. ಹೋದ ವರ್ಷ ಬರಗಾಲಬಿದ್ದು ಪರಿಸ್ಥಿತಿ ಮತ್ತೂ ಕೆಟ್ಟಿದೆ. ಈ ದುಸ್ಥಿತಿ ಕಂಡು ಎಷ್ಟೋ ಜನರು ಜನತಾ ರಾಜ್ಯ ಬಂದರೂ ತಮ್ಮ ಬವಣೆ ದೂರಾಗಲಿಲ್ಲೆಂದೂ ಈಗಿನ ಕಲಮಿನ ಆಡಳಿತೆಯೆ ಒಳ್ಳೆಯದಿತ್ತೆಂದೂ ಎನ್ನುತ್ತಿರುವದು ಕೇಳಬರುತ್ತದೆ. ಆದರೆ ಗವರ್ನರರ ರಾಜ್ಯವಿದ್ದರೆ ಬಂಗಾಲದಲ್ಲಿಯಂತೆ ಜನರು ಸಾಯುತ್ತಿದ್ದರೆಂದು ನಾನು ಹೇಳಬಲ್ಲೆ' ಎಂದರಲ್ಲದೆ ಬರಿದೆ ದೂರಿಕೊಳ್ಳದೆ ಕಷ್ಟನಿವಾರಣೆಯ ಉಪಾಯ ಹುಡುಕಬೇಕೆಂದೂ ಹೇಳಿದರು.

ಬೆಳಗಾವಿಯಿಂದ ಮಾನ್ಯ ಮುರಾರಜಿಯವರ ಕರ್ನಾಟಕ ಸಂಚಾರ ತಾ. ೧೭ಕ್ಕೆ ಪ್ರಾರಂಭವಾಯಿತು. ಬೆಳಗಾವಿಯಲ್ಲಿ ಸಿವಿಲ್ ಹಾಸ್ಪಿಟಲ್ಲಿಗೆ ಭೆಟ್ಟಿಕೊಟ್ಟು ಅಲ್ಲಿ ರೋಗಿಗಳ ಧರ್ಮಶಾಲೆಯ ಶಂಕು ಸ್ಥಾಪನೆ ಮಾಡಿದರು. ನಲವಡಿ ಧಾರವಾಡ, ಗದಗ, ಮುಮ್ಮಿಗಟ್ಟಿ, ಗರಗ, ಅಮರಗೋಳ ಮೊದಲಾದ ಸ್ಥಳಗಳಿಗೆ ಭೆಟ್ಟಿಕೊಟ್ಟರು. ಮುಮ್ಮಿಗಟ್ಟಿಯಲ್ಲಿ ಕಾಂಗ್ರೆಸ್ ಕಚೇರಿಯನ್ನು ಉದ್ಘಾಟನೆ ಮಾಡಿದರು.

"ಇದ್ದವರು ಇಲ್ಲದವರಿಗೆ ಸಹಾಯ ಸಹಕಾರ ನೀಡುವ ಸಮಾಜ ಬೇಕು. ಒಬ್ಬರನ್ನೊಬ್ಬರು ಹತ್ತಿಕ್ಕುವ ದುಡುಗರ ಸಮಾಜ ಬೇಡ. ಹೊಲದೊಡೆಯರೂ ರೈತರೂ ಸ್ನೇಹ ಸಹಕಾರದಿಂದ ನಡೆಯಬೇಕು" ಎಂದು ಅದೂರಲ್ಲಿ ಹಾನಗಲ್ಲು ತಾಲೂಕ ರೈತ ಪರಿಷತ್ತಿನ ಉದ್ಘಾಟನ ಮಾಡುತ್ತ ಅವರು ಹೇಳಿದರು.



#### ಸಂಯುಕ್ತಪ್ರಾಂತ

ಹಿಂದೀ ರಾಷ್ಟ್ರೀಯ ಟ್ರೇಡ್ ಯೂನಿಯನ್ ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಗಳಾದ ಖಂಡುಭಾಯಿ ದೇಸಾಯಿ ಎಂ ಎಲ್ ಎ ಅವರು ತಾ. ೧೩ ರಲ್ಲಿ ಅಹಮ್ಮದಾಬಾದದ ಮ್ಯುನಿಸಿಪಲ್ ನವಕರರ ಸಂಘವನ್ನುದ್ದೇಶಿಸಿ ಭಾಷಣ ಮಾಡುತ್ತ ಹೊಸ ಸಂಸ್ಥೆಯು ಜಾತೀಯ ಅಲ್ಲವೆ ರಾಜಕೀಯ ಪಕ್ಷಗಳಿಂದ ದೂರ ಉಳಿಯುವದೆಂದೂ ಆದರೆ ಅದು ದೇಶದಲ್ಲಿಯ ಎಲ್ಲ ಕಾಂಗ್ರೆಸ್ಸಿಗರ ಸಹಾನುಭೂತಿ ಸಂಪಾದಿಸುವದೆಂದೂ ಹೇಳಿದರು.

# ಹಿಂದುಸ್ಥಾನ



#### ಮುಂಬಯಿ

ಬತ್ತದ ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಅಹಮದಾಬಾದದ ಜವಳಿ ಗಿರಣಿಯೊಂದರಲ್ಲಿ ಪ್ರಯೋಗಿಸಿ ನೋಡಲಾದ ಯೋಜನೆಯೊಂದನ್ನು ಅಹಮದಾಬಾದದ ಗಿರಣಿಯೊಂದರ ಒಡೆಯರಾದ ಶ್ರೀ ವಾಡಿಲಾಲ ಲಲ್ಲೂಭಾಯಿಯವರು ಕೇಂದ್ರ ಸರಕಾರಕ್ಕೆ ಸೂಚಿಸಿದ್ದಾರೆ. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರುವುದರಿಂದ ನೂರಕ್ಕೆ ಇಪ್ಪತ್ತರಂತೆ ಬಟ್ಟೆಯನ್ನು ಹೆಚ್ಚಿಗೆ ಉತ್ಪಾದಿಸಲಾಗುವುದಂತೆ ಎಂದು ಕೇಂದ್ರ ಶಾಸನ ಸಭೆಯ ಕಾಂಗ್ರೆಸ್ ಪಕ್ಷದ ಕಾರ್ಯದರ್ಶಿಗಳಾದ ಶ್ರೀ ಎನ್. ವಿ. ಗಾಡಗೀಳರು ಹೇಳಿದರು.

ಮುಂಬಯಿ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಸದಸ್ಯರೂ "ಬೆಸ್ಟ್" ಕೆಲಸಗಾರರ ಸಂಘದ ಕಾರ್ಯದರ್ಶಿಗಳೂ ಆದ ಶ್ರೀ ಜಿ. ಡಿ. ಮೆಹತಾರು ಕಾಂಗ್ರೆಸ್ ಸಂಸ್ಥೆಯಲ್ಲಿ ಒಂದು ವರ್ಷದ ವರೆಗೆ ಯಾವ ರೀತಿಯಲ್ಲೂ ಭಾಗವಹಿಸಬಾರದೆಂದು ಪ್ರತಿಬಂಧಿಸಲಾಗಿದೆ. ಕಾಂಗ್ರೆಸ್ ಕಮೀಟಿಯವರು ಸಂಪನ್ನು ಬಂದಿಸುವ ಗೊತ್ತುವಳಿಯನ್ನು ಪಾಸು ಮಾಡಿದಾಗಲೂ ಮೆಹತಾರು ಸಂಪನ್ನು ಮುಂದರಿಸಲು ಪ್ರಯತ್ನಿಸಿದರೆಂದು ಕಾಂಗ್ರೆಸ್ ಕಾರ್ಯಸಮಿತಿಯವರು ಅವರ ಮೇಲೆ ಶಿಸ್ತಿನಕ್ರಮ ತೆಗೆದುಕೊಂಡಿದ್ದಾರೆ. ಶ್ರೀ ಮೆಹತಾರು ತಾವು ನಿರಪರಾಧಿಗಳೆಂದೂವೇದು ಪ್ರತಿಪಾದಿಸಿ ಕ್ಷಮೆ ಬೇಡಲು ನಿರಾಕರಿಸಿದರು.

ಜಿನೇವಾದಲ್ಲಿ ಜೂನ್ ೧೯ಕ್ಕೆ ಕೂಡಲಿರುವ 'ಅಂತರರಾಷ್ಟ್ರೀಯ ಕಾರ್ಮಿಕರ ಪರಿಷತ್ತಿಗೆ ಕಾರ್ಮಿಕರ ಪ್ರತಿನಿಧಿಯೆಂದು ಶ್ರೀ ಎನ್. ಎಂ. ಜೋಶಿಯವರನ್ನು ಹಿಂದುಸ್ಥಾನ ಸರಕಾರದವರು ನಿಯಮಿಸಿದ್ದಾರೆ. ಶ್ರೀಗಳಾದ ಹರಿಹರನಾಥಶಾಸ್ತ್ರಿ, ಮಣಿಬೇನ ಗಾಂಧಿ, ಅಡಾಮ ಅದಿಲ ಮತ್ತು ಜಿ. ಜಿ. ಮೆಹ್ತಾರವರನ್ನು ಸಲಹೆಗಾರರೆಂದು ನಿಯಮಿಸಲಾಗಿದೆ ಈ ಎಲ್ಲ ನೇಮಕಗಳು ಅ. ಭಾ. ಟ್ರೇಡ ಯುನಿಯನ್ನಿನ ಸಲಹೆಯಂತೆ ಮಾಡಲ್ಪಟ್ಟವು.

ಸಂಯುಕ್ತ ಕರ್ನಾಟಕ ಪತ್ರಿಕೆಯ ಸಂಪಾದಕರಾದ ಶ್ರೀ ಮೊಹರೆ ಹಣಮಂತರಾಯರನ್ನು ಕರ್ನಾಟಕ ವಿಶ್ವವಿದ್ಯಾಲಯ ಸಮಿತಿಯ ಸದಸ್ಯರನ್ನಾಗಿ ಮುಂಬಯಿ ಸರಕಾರವು ನಿಯಮಿಸಿದೆ.

ಪ್ರೀವಿ ಕೌನ್ಸಿಲದ ಮುಂದಿರುವ ಹಿಂದೀ ಅಪೀಲುಗಳ ವಿಚಾರಣೆ ನಡೆಸಲು ಡಾ. ಎಂ. ಆರ್. ಜಯಕರರಿಗೆ ಕೇಳಿಕೊಳ್ಳಲಾಗಿದೆಯೆಂದೂ ಪ್ರೀವಿ ಕೌನ್ಸಿಲದ ನ್ಯಾಯಾಧೀಶರ ಹುದ್ದೆಯನ್ನು ಸ್ವೀಕರಿಸಲು ಅವರು ಮುಂದಿನ ವಾರ ಲಂಡನ್ನಿಗೆ ವಿಮಾನ ಮೂಲಕ ತೆರಳುವರೆಂದೂ ತಿಳಿಯುತ್ತದೆ.

#### ಪಂಜಾಬ

ಲಾಹೋರಿನ ರಂಗಮಹಾಲಿನ ಬಳಿಯಲ್ಲಿ ತಾ. ೧೪ ರಲ್ಲಿ ಇಟ್ಟಿಂಗಿ ಹಾಗು ಮದ್ದಿನ ಕೊಳ್ಳಿಗಳ ಹಾರಾಟವಾಗಿ ಸೈನಿಕರೂ ಪೋಲೀಸರೂ ಗೋಳೀಬಾರ ಮಾಡಿದರು. ೧೧ ಜನರಿಗೆ ಗಾಯಗಳಾಗಿವೆ; ಸತ್ತವರೆಷ್ಟೆಂದು ತಿಳಿದುಬಂದಿಲ್ಲ. ಬೆಂಕಿಹತ್ತಿದ ಜಾಗಗಳಲ್ಲಿ ಬೆಂಕಿಯನ್ನಾರಿಸಲು ಅಗ್ನಿಶಾಮಕದಳಗಳನ್ನು ಕೊಡಲಾಗಿದೆ.

ಅಮೃತಸರದಲ್ಲಿ ಕಟ್ರಾ ಮೋತೀರಾಮ ಮತ್ತು ಬಜಾರ ಸಬ ಡಿವಿಜನ್ ವಿಭಾಗಗಳಲ್ಲಿ ಜಾತೀಯ ತಿಕ್ಕಾಟ ನಡೆದವು. ಪೋಲೀಸ ಹಾಗು ಸೈನಿಕರು ಗುಂಡುಹಾರಿಸಿ ಪರಿಸ್ಥಿತಿಯನ್ನು ಹಿಡಿತದಲ್ಲಿ ತಂದರು.

ಘಟನಾಸಮಿತಿಯ ಹರಿಜನ ಸದಸ್ಯರಾದ ಪೃಥ್ವೀಸಿಂಗ್ ಆಝಾದ ಎಂ. ಎಲ್. ಎ. ಅವರು ತಾ ೧೩ ರಲ್ಲಿ ಪಂಜಾಬ ಗವರ್ನರರ ಭೆಟ್ಟಿ ತೆಗೆದುಕೊಂಡು ಪಶ್ಚಿಮ ಹಾಗೂ ಪೂರ್ವ ಪಂಜಾಬಗಳನ್ನು ವಿಭಾಗಿಸುವಲ್ಲಿ ಚೀನಾಬ್‌ನದಿಯನ್ನು ಗಡಿರೇಷೆಯನ್ನಾಗಿ ಹಿಡಿಯಬೇಕೆಂದು ಮನವಿ ಸಲ್ಲಿಸಿದರು.

ಬನಾರಸ ನಗರ ಮ್ಯಾಜಿಸ್ಟ್ರೇಟರು ೧೪೪ ನೆಯ ಕಲಮಿನನ್ವಯ ತಾ. ೧೭ ರಲ್ಲಿ ನಗರದಲ್ಲಿ ಪಟಗಳನ್ನು ಹಾರಿಸುವುದನ್ನು ೧೫ ದಿನಗಳ ವರೆಗೆ ಅಕ್ರಮ ಮಾಡಿದ್ದಾರೆ.

#### ಮದ್ರಾಸ

ಮದ್ರಾಸ ಪ್ರಾಂತದ ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ಮದ್ರಾಸ ಸರಕಾರವು ೫ ಕೋಟಿ ರೂಪಾಯಿಗಳ ವೆಚ್ಚದ ಮೇಲೆ ಪಂಚವಾರ್ಷಿಕ ಯೋಜನೆಯೊಂದನ್ನು ಈ ವರ್ಷದಿಂದ ಕೈಕೊಳ್ಳಲಿದೆ ಎಂದು ಲೋಕೋಪಯೋಗಿ ಮಂತ್ರಿಗಳಾದ ಶ್ರೀ ಭಕ್ತವತ್ಸಲಂ ಅವರು ಸಾರಿದರು.

ಬಕಿಂಗ್‌ಹ್ಯಾಮ ಮತ್ತು ಕರ್ನಾಟಕ ಜವಳಿ ಗಿರಣಿಯ ಕೆಲಸಗಾರರು ತಮ್ಮ ಸಂಪನ್ನು ನಿಲ್ಲಿಸಿ ಕೆಲಸಕ್ಕೆ ಹಿಂತಿರುಗಬೇಕೆಂದು ರಾಜಾಜಿಯವರು ದಿಲ್ಲಿಗೆ ತೆರಳುವ ಮುನ್ನ ಕೇಳಿಕೊಂಡರು. ಈ ಗಿರಣಿಗಳಲ್ಲಿ ನಡೆದ ಸಂಪಿನ ಪರಿಣಾಮವಾಗಿ ೯ ಲಕ್ಷ ಗಜ ಬಟ್ಟೆಯ ಉತ್ಪಾದನೆಯು ನಿಂತು ಹೋಗಿದೆಯೆಂದೂ ಈಗಿನಂತೆ ಕೊರತೆಯ ಪರಿಸ್ಥಿತಿಯಲ್ಲಿ ಬಟ್ಟೆಯ ಉತ್ಪಾದನೆಯನ್ನು ನಿಲ್ಲಿಸುವದು ದುರ್ದೈವವೆಂದೂ ಮದ್ರಾಸಿನ ಮುಖ್ಯ ಪ್ರಧಾನರು ಹೇಳಿದರು.

ಮದ್ರಾಸ್ ಗವರ್ನರರು ಜೂನ್ ೧೫ ರಿಂದ ೨೨ ರ ವರೆಗೆ ಸೇಲಂ ಮತ್ತು ಕೊಯಿಮುತ್ತೂರ ಜಿಲ್ಲೆಗಳಲ್ಲಿ ಸಂಚರಿಸಲಿರುವರೆಂದು ಪ್ರಕಟನೆ ಹೊರಟಿದೆ.

ಮದ್ರಾಸ ಪ್ರಾಂತದಲ್ಲಿಯ ಶಿಕ್ಷಕರು ತಮ್ಮ ಬೇಡಿಕೆಗಳು ಮಾನ್ಯವಾಗದಿದ್ದರೆ ಮತ್ತು ನೌಕರಿಯ ಸ್ಥಿತಿಗತಿ ಸುಧಾರಿಸದಿದ್ದರೆ ಇದೇ ಜುಲೈ ಒಂದನೇ ತಾರೀಕಿನಿಂದ ಮುಷ್ಕರ ಹೂಡುವರು ಎಂಬ ಗೊತ್ತುವಳಿಯು ಮದ್ರಾಸ ಪ್ರಾಂತದ ಕೃತಿಯ ಶಿಕ್ಷಣ ಪರಿಷತ್ತಿನ ಅಧಿವೇಶನದಲ್ಲಿ ಸ್ವೀಕೃತವಾಗಿದೆ. ಈ ಮುಷ್ಕರ ಪ್ರಾರಂಭವಾದರೆ ಸುಮಾರು ೨೦೦೦೦ ಮಾಧ್ಯಮಿಕ ಹಾಗು ಪ್ರಾಥಮಿಕ ಶಾಲೆಗಳಲ್ಲಿಯ ೧೦೦೦೦೦ ಶಿಕ್ಷಕರು ಭಾಗವಹಿಸುವದಾಗಿ ತಿಳಿಯುತ್ತದೆ.

#### ಹೊಸದಿಲ್ಲಿ

ಅನೇಕ ಹಿಂದೀ ಸಂಸ್ಥಾನಗಳು ಘಟನಾ ಸಮಿತಿಯನ್ನು ಸೇರಲು ನಿರ್ಧರಿಸಿದ್ದರಿಂದ ನರೇಂದ್ರ ಮಂಡಲದ ಅಧ್ಯಕ್ಷ ಪದವಿಗೆ ಭೋಪಾಲದ ನವಾಬರು ರಾಜೀನಾಮೆ ಕೊಟ್ಟರು. ವರೆಂದೂ ಅವರ ರಾಜೀನಾಮೆಯು ಸ್ವೀಕೃತವಾಗಿದ್ದು ಪತಿಯಾಲಾ ಮಹಾರಾಜರು ಅವರ ಸ್ಥಳಕ್ಕೆ ಬರಬಹುದೆಂದೂ "ಹಿಂದು" ಪತ್ರಿಕೆಯ ಹೊಸದಿಲ್ಲಿ ಸುದ್ದಿಗಾರನು ಬರೆಯುತ್ತಾನೆ.

ನಡುಗಾಲ ಸರಕಾರದ ಆರೋಗ್ಯ ಮಂತ್ರಿಗಳಾದ ಗಝನಫರ ಅಲ್ಲಿಖಾನರು ಇಂದು ಒಂದು ಪ್ರಕಟನೆ ಹೊರಡಿಸಿ ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟು ಹಿಂಸೆಯನ್ನು ಆಶ್ರಯಿಸುವದರಿಂದ ಯಾವ ಪಕ್ಷಕ್ಕೂ ಲಾಭವಿಲ್ಲೆಂದು ಉಲ್ಲೇಖಿಸಿ ಇತ್ತೀಚೆಗೆ ಕಾಯಿದೆ ಆಝಮ ಜಿನ್ನಾ ಹಾಗು ಮಹಾತ್ಮಾ ಗಾಂಧಿಯವರು ಶಾಂತತೆಯ ಸಂಬಂಧದಲ್ಲಿ ಹೊರಡಿಸಿದ ಸಂಯುಕ್ತ ಬಿನ್ನಹದ ಕಡೆಗೆ ಪಂಜಾಬಿಗಳ ಲಕ್ಷ್ಯವನ್ನು ಎಳೆದಿದ್ದಾರೆ.

ವೈಸರಾಯರು ರಾಜಕೀಯ ಮಾತುಕತೆಗಳಿಗಾಗಿ ಲಂಡನಿಗೆ ಹೋಗಲಿರುವದರಿಂದ ಅವರ ಸ್ಥಳದಲ್ಲಿ ತಾತ್ಪೂರ್ತಿಕವಾಗಿ ಮುಂಬಯಿಯ ಗವರ್ನರರಾದ ಸರಜಾನ ಕಾಲವಿಲ್ಲರನ್ನೂ ಸರ ಜಾನರ ಸ್ಥಳಕ್ಕೆ ಸರ ಸೊಂಟ ವೆಂಕಟರಾಮಮೂರ್ತಿಯವರನ್ನು ತಾತ್ಪೂರ್ತಿಕ ಮುಂಬಯಿಯ ಗವರ್ನರರನ್ನಾಗಿಯೂ ನೇಮಿಸಲಾಗಿದೆ.

#### ಬಂಗಾಲ

ಈಗಿನ ಬಂಗಾಲ ಮಂತ್ರಿಮಂಡಲವನ್ನು ವಿಸರ್ಜಿಸಬೇಕು ಮತ್ತು ಕಲಕತ್ತ ನಗರದ ನ್ನೊಳಗೊಂಡು ಹಿಂದು ಬಹುಸಂಖ್ಯಾಕರಿರುವ ಭಾಗವನ್ನು ಪ್ರತ್ಯೇಕ ಪ್ರಾಂತಮಾಡಬೇಕೆಂದು ಕಲಕತ್ತಾ ಕಾರ್ಪೊರೇಶನ್ನಿನ ಡೆಪ್ಯೂಟಿ ಮೇಯರರಾದ ಗಾಡಗೋಡಿಯಾ ಇವರು ನೋಟೀಸು ಕೊಟ್ಟ ಗೊತ್ತುವಳಿಯು ತಾ ೧೪ ರ ಮಧ್ಯಾಹ್ನ ಜೆಲ್ಲಾ ಮ್ಯುನಿಸಿಪಲ್ ಕಚೇರಿಯಲ್ಲಿ ಸ್ವೀಕೃತವಾಯಿತು. ಮೇಯರರಾದ ಶ್ರೀ ಎಸ್ ಸಿ. ರಾಯಚೌಧರಿಯವರು ಅಧ್ಯಕ್ಷತೆ ವಹಿಸಿದ್ದರು.

# ರಾಷ್ಟ್ರೀಯ ಮಜದೂರ ಕಾಂಗ್ರೆಸ

## ಕರ್ನಾಟಕ ಶಾಖೆಯ ಸ್ಥಾಪನೆ

ವರ್ಗದ್ವೇಷದ ಬದಲು ವರ್ಗ ಸಾಮರಸ್ಯದ ತಳಹದಿಯಮೇಲೆ ಕೂಲಿಕಾರ ಚಳವಳಿಯನ್ನು ಕಟ್ಟಿ ದೇಶದ ಸಾರ್ವತ್ರಿಕ ಹಿತದೊಡನೆ ಕೂಲಿಕಾರರ ಹಿತವನ್ನು ಸಾಧಿಸುವ ಉದ್ದೇಶದಿಂದ ಸ್ಥಾಪಿತವಾದ ಅ. ಭಾ. ರಾಷ್ಟ್ರೀಯ ಮಜದೂರ ಕಾಂಗ್ರೆಸ್ಸಿನ ಕರ್ನಾಟಕ ಶಾಖೆ ಹುಬ್ಬಳ್ಳಿಯಲ್ಲಿ ತಾ. ೨೦ ಕ್ಕೆ ಸ್ಥಾಪಿಸಲ್ಪಟ್ಟಿತು.

ಈ ಬಗ್ಗೆ ಕರೆಯಲ್ಪಟ್ಟಿದ್ದ ವಿಶೇಷ ಸಭೆಗೆ ಸುಮಾರು ೨೦೦ ಜನರು ಬಂದಿದ್ದರು. ಕ. ಪ್ರಾಂ ಕಾಂಗ್ರೆಸ ಅಧ್ಯಕ್ಷರಾದ ಶ್ರೀ ನಿಜಲಿಂಗಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಶಾಖೆಯ ಸ್ಥಾಪನೆಯು ಜೊತೆಜೊತ್ತ ಶ್ರೀ ರಂಗರಾವ ದಿವಾಕರರು ಸಭೆಯ ಉದ್ದೇಶಗಳನ್ನು ವಿವರಿಸುತ್ತ ಕೂಲಿಕಾರ ಚಳವಳಿಯಲ್ಲಿ ಕಮ್ಯುನಿಸ್ಟರ ಅಕ್ರಮಣದಿಂದೊದಗಿದ ಗಂಡಾಂತರಗಳನ್ನು ತೋರಿಸಿ ಕೊಟ್ಟರು. ಸ್ವಾತಂತ್ರ್ಯದ ಹೋರಾಟ ಇಂದು ಮುಗಿದ. ಹಾಗಿದ್ದರೂ ದೇಶದಲ್ಲಿಯ ಬಡತನ, ಆರ್ಥಿಕ ದುಸ್ಥಿತಿಗಳನ್ನು ನಿವಾರಿಸುವದು ಹಾಗೆಯೇ ಉಳಿದಿದೆ. ಇವು ಹೋಗದೆ ರಾಜಕೀಯ ಸ್ವಾತಂತ್ರ್ಯ ವ್ಯರ್ಥವಾಗುವದು. ನಾವು ಉದ್ಯೋಗ ವ್ಯವಸಾಯಗಳನ್ನು ಬೆಳೆಸಿಕೊಳ್ಳಬೇಕಾಗಿದ್ದರೂ ಶೋಷಣ ಪ್ರಧಾನವಾದ ಬಂಡವಲ ಶಾಹಿ ಆರ್ಥಿಕ ಪದ್ಧತಿ ನಾಶವಾಗಬೇಕು. ಆದರೆ ಕೂಲಿಕಾರರೂ ತಮ್ಮ ಹಿತಕ್ಕಾಗಿ ಮಾತ್ರ ದುಡಿಯದೆ ರಾಷ್ಟ್ರಹಿತ ದೃಷ್ಟಿಯಿಂದ: ಕೆಲಸ ಮಾಡುವದು ಹಿತಕರವೆಂದು ರಾಷ್ಟ್ರೀಯ ಮಜದೂರ ಕಾಂಗ್ರೆಸ್ಸು ನಂಬಿದೆ. ಸಂಪು ಸತ್ಯಾಗ್ರಹಗಳು ಅತ್ಯಂತಿಕ ಉಪಾಯಗಳು ಉಳಿದೆಲ್ಲ ಉಪಾಯಗಳು ವ್ಯರ್ಥವಾದ ಮೇಲೆಯೆ ಅವುಗಳನ್ನು ಕೈಕೊಳ್ಳಬೇಕು. ವೈಯಕ್ತಿಕ ಬೆಳವಣಿಗೆ ಮತ್ತು ಪ್ರಗತಿಗೆ ಕಾರಣವಾಗುವಂಥ ವಾತಾವರಣವನ್ನು ನಿರ್ಮಾಣ ಮಾಡಿದಷ್ಟು ಪರಸ್ಪರ ಸ್ನೇಹ ಸಹಕಾರಗಳು ಬೆಳೆಯುವವೆಂದು ಅವರು ಹೇಳಿದರು.

ಅಧ್ಯಕ್ಷರಾಗಿದ್ದ ಶ್ರೀ ನಿಜಲಿಂಗಪ್ಪನವರು ಸ್ವಾತಂತ್ರ್ಯವನ್ನು ರಕ್ಷಿಸಿ ಅದನ್ನು ಉಪಯೋಗಿಸಿಕೊಂಡರೆ ಕೂಲಿಕಾರರ ವ್ಯಕ್ತಿತ್ವದ ವಿಕಾಸವಾಗುವದೆಂದರು. ಮುಂಬಯಿಯಿಂದ ಸಭೆಗೆ ಬಂದಿದ್ದ ಶ್ರೀ ಓಸ್ವಾಲರು ದಿಲ್ಲಿಯಲ್ಲಿ ಈ ಹೊಸ ಸಂಸ್ಥೆ ಸ್ಥಾಪಿಸಲ್ಪಟ್ಟನಂತರ ಶಾಖೆಯನ್ನು ಸ್ಥಾಪಿಸಿಕೊಳ್ಳುವದರಲ್ಲಿ ಕರ್ನಾಟಕವೇ ಮೊದಲನೆಯದೆಂದು ಅದನ್ನು ಅಭಿನಂದಿಸಿದರು. ಶ್ರೀ ಟಿ. ಸುಬ್ರಹ್ಮಣ್ಯಂ (ಬಳ್ಳಾರಿ), ಟಿ ಅಂಕಲೀಕರ (ವಿಜಾಪುರ), ಶ್ರೀ ಎಸ್ ವಿ ಜೋಸಿ (ಹುಬ್ಬಳ್ಳಿ) ಪಿ. ಆರ್ ಕುಮಾರನ್ (ಮೈಸೂರ) ಶ್ರೀ ಯಮುನಪ್ಪ (ಬೆಳಗಾವಿ) ಶ್ರೀ ಕುಲಕರ್ಣಿ (ಕೊಲ್ಹಾಪುರ) ಮೊದಲಾದ ಕರ್ನಾಟಕದ ವಿವಿಧ ಭಾಗಗಳ ಪ್ರತಿನಿಧಿಗಳು ಇಂಥ ಸಂಸ್ಥೆಯ ಅವಶ್ಯಕತೆಯನ್ನೆತ್ತಿ ಹೇಳಿ ಅದರಲ್ಲಿ ವಿಶ್ವಾಸವನ್ನು ವ್ಯಕ್ತಗೊಳಿಸಿದರು. ಸರವಾರ ವೀರನಗೌಡರು ಕಮ್ಯುನಿಸ್ಟರೂ ಸೋಶಿಯಾಲಿಸ್ಟರೂ ಕೂಲಿಕಾರರನ್ನು ಅಡ್ಡ ಹಾದಿ ಹಿಡಿಸಿರುವದರಿಂದ ಈ ಸಂಸ್ಥೆಯ ಸಂಘಟನೆ ಸುಲಭವಾಗಿ ಆಗಲಿಕ್ಕಿಲ್ಲವಾದರೂ ಕಾಂಗ್ರೆಸ್ಸಿನಲ್ಲಿ ವಿಶ್ವಾಸವಿಟ್ಟಂತೆ ಇದರಲ್ಲೂ ಕೊನೆಗೆ ಜನರ ವಿಶ್ವಾಸ ಹುಟ್ಟದಿರದೆಂದರು. ಸ್ಥಳೀಯ ಕೂಲಿಕಾರ ಮತ್ತು ಸಾಮ್ಯವಾದಿ ಕಾರ್ಯಕರ್ತರೂ ಮಾತಾಡಿದರು.

ಅಹಮದಾಬಾದಿನ ಜವಳಿ ಕೂಲಿಕಾರರನ್ನು ಗಾಂಧೀಜಿಯ ನೇತೃತ್ವದಲ್ಲಿ ಅವರ ವಿಚಾರಗಳನ್ನನುಸರಿಸಿ ಸಂಘಟಿಸಿದ್ದು ಯಶಸ್ವಿಯಾದುದನ್ನುಲ್ಲೇಖಿಸಿ ಶ್ರೀ ಎಂ. ಎಚ್. ಶಹಾರವರು ರಾಷ್ಟ್ರೀಯ ಮಜದೂರ ಕಾಂಗ್ರೆಸ್ಸಿನ ಸ್ಥಾಪನೆಯನ್ನು ಸ್ವಾಗತಿಸಿ ಅದರ ಉದ್ದೇಶದಲ್ಲಿ ವಿಶ್ವಾಸ ವ್ಯಕ್ತಗೊಳಿಸುವ ಗೊತ್ತುವಳಿ ಮಂಡಿಸಿದರು. ಅದು ಸ್ವೀಕೃತವಾಯಿತು. ಇನ್ನೊಂದು ಗೊತ್ತುವಳಿಯ ಮೂಲಕ ಈ ಬಗ್ಗೆ ಒಂದು ಸಮಿತಿ ನೇಮಿಸಲ್ಪಟ್ಟಿತು. ಅದಕ್ಕೆ ಶ್ರೀ ನಿಜಲಿಂಗಪ್ಪನವರು ಅಧ್ಯಕ್ಷರು. ಶ್ರೀ ಕೆ ಬಿ ದುಂದೂರರು ಕಾರ್ಯದರ್ಶಿಗಳು.

ಶ್ರೀ ಸಿ. ಎಂ. ಪೂಣಚ್ಚ (ಕೊಡಗು) ಶ್ರೀ ಯಮುನಪ್ಪ ಅರಭಾವಿ (ಬೆಳಗಾವಿ) ಬ್ಯಾ. ಅಂಕಲೀಕರ (ವಿಜಾಪುರ) ಶ್ರೀ ಕೆ. ಟಿ. ಭಾಷ್ಯಂ (ಮೈಸೂರು), ಶ್ರೀ ಬಿ. ಎಸ್. ಮಾವಿನಕುರ್ವೆ (ಉ. ಕನ್ನಡ) ಶ್ರೀ ಶಂಭುರಾವ ಜೋಶಿ (ಧಾರವಾಡ) ಇವರು ಸದಸ್ಯರಾಗಿರುವರು. ಸಮಿತಿಯಲ್ಲಿ ಹೊಸ ಜನರನ್ನು ಸೇರಿಸಿಕೊಳ್ಳಲು ಮತ್ತು ನಿಯಮ ನಿಬಂಧನೆಗಳನ್ನು ಮಾಡಿಕೊಳ್ಳಲು ಅದಕ್ಕೆ ಅಧಿಕಾರ ಕೊಡಲಾಗಿದೆ.

## ಹರಪನಹಳ್ಳಿ ಸಾಹಿತ್ಯ ಸಮ್ಮೇಲನದ ದೃಶ್ಯಗಳು



ಸಮ್ಮೇಲನದ ಉದ್ಘಾಟಕರಾದ ಮಾನ್ಯ ಮಂತ್ರಿ ಶ್ರೀ ಎ. ಬಿ. ಶೆಟ್ಟರು (ನಡುವೆ), ಬಳ್ಳಾರಿ ಜಿಲ್ಲಾಧಿಕಾರಿ ಶ್ರೀ ಕೆ. ಅನಂತರಾಮನ್ (ಎಡ), ಹಾಗು ಕನ್ನಡನುಡಿ ಸಂಪಾದಕ ಶ್ರೀ ಶಿವಮೂರ್ತಿ ಶಾಸ್ತ್ರಿಗಳೊಡನೆ.



ಅಧ್ಯಕ್ಷರ ಮೆರವಣಿಗೆಯ ರಥ



ಸಮ್ಮೇಲನಾಧ್ಯಕ್ಷ ಶ್ರೀ ಪಿ. ಕೆ. ವೆಂಕಟರಾಮಯ್ಯನವರು (ಎಡ) ಸ್ವಾಗತ ಕಾರ್ಯದರ್ಶಿ ಶ್ರೀ ಪಂಚಾಕ್ಷರಯ್ಯನವರೊಡನೆ.



ಸಮ್ಮೇಲನ ಮಂಟಪದ ಹೊರಗೆ ಧ್ವಜವಂದನೆಗೆ ಸೇರಿದ ಜನಸಂದಣಿ. ಶ್ರೀ ಪಿ. ಕೆ. ಯವರನ್ನು ಧ್ವಜಸ್ತಂಭದ ಬಳಿ ಕಾಣಬಹುದು.



ಮಹಿಳಾಗೋಷ್ಠಿಯ ಅಧ್ಯಕ್ಷರಾದ ಶ್ರೀಮತಿ ಪಾರ್ವತೀಬಾಯಿ ಕೇಸರಿಯವರು (ನಡುವೆ) ಶ್ರೀಮತಿ ಇಂದಿರಾ (ಎಡಕ್ಕೆ ಕೆಳಗೆ, ಪ್ರೊ. ಸುಶೀಲಮ್ಮ (ಎಡಕ್ಕೆ ಮೇಲೆ) ಗೋಷ್ಠಿಯ ಉದ್ಘಾಟಕರಾದ ಶ್ರೀಮತಿ ಎಸ್. ಜಿ. ವೆಂಕಟರಾಮಪ್ಪಮ್ಮ (ಬಲಕ್ಕೆ ಮೇಲೆ) ಹಾಗು ಪರಿಷತ್ತಿನ ಮಹಿಳಾ ಶಾಖೆಯ ಕಾರ್ಯದರ್ಶಿ ಶ್ರೀಮತಿ ವೇದವತಿಯವರೊಡನೆ.

[ಫೋಟೋಗಳು— „ರಾಜ" ಹುಬ್ಬಳ್ಳಿ]



ಸಾಹಿತ್ಯಗೋಷ್ಠಿಯ ಅಧ್ಯಕ್ಷ ಶ್ರೀ ಸಿದ್ಧಯ್ಯ ಪುರಾಣಿಕರು

## ಪೇಶಾವರದಲ್ಲಿ ಲೀಗ ಕೈದಿಗಳ ದಂಗೆ

ಪೇಶಾವರ ಸೆರೆಮನೆಯಲ್ಲಿ ಓರ್ವ ಸಾಮಾನ್ಯ ಕೈದಿಯನ್ನು ಗಲ್ಲಿಗೇರಿಸುವ ಬಗ್ಗೆ ಅಲ್ಲಿಯ ಅಧಿಕಾರಿಗಳು ಕೈಕೊಂಡ ಸಿದ್ಧತೆಗಳ ವಿರುದ್ಧ ಮುಸ್ಲಿಂ ಲೀಗ ರಾಜಕೀಯ ಕೈದಿಗಳು ತಾ ೧೯ ರ ಸಂಜೆ ಮತಪ್ರದರ್ಶನ ನಡೆಸಿದರೆಂದೂ ತುರಂಗದ ಅಧಿಕಾರಿಗಳು ಅಶ್ರುವಾಯುವನ್ನು ಪಯೋಗಿಸಿ ಅವರನ್ನು ಚದುರಿಸಬೇಕಾಯಿತೆಂದೂ ಎಲ್ಲ ಕೈದಿಗಳ ಹಾಸಿಗೆ ಮೊದಲಾದವುಗಳನ್ನು ಕಸಿದುಕೊಳ್ಳಲಾಗಿದೆಯೆಂದೂ ಅಧಿಕೃತ ಪ್ರಕಟನೆ ಹೊರಟಿದೆ. ಮುಸ್ಲಿಂ ಲೀಗ ರಾಜಕೀಯ ಕೈದಿಗಳು ವಧಸ್ತಂಭವನ್ನು ಕೆಳಗುರುಳಿಸಿ ಸುಟ್ಟು ಗಲ್ಲಿನ ಶಿಕ್ಷೆಗೆ ಗುರಿಮಾಡಲಾದ ಐದು ಜನ ಕೈದಿಗಳನ್ನು ಅವರ ಕೋಣೆಗಳಿಂದ ಹೊರತಂದು ತಮ್ಮ ಕೋಣೆಗೊಯ್ದರು. ಸಾಮಾನ್ಯ ಕೈದಿಗಳ ಕೋಣೆಯ ಕೀಲಿ ಮುರಿದರೂ ಆ ಕೈದಿಗಳು ಇವರೊಡನೆ ಸೇರಲಿಲ್ಲ. ಸೆರೆಮನೆಯ ಕಾರಖಾನೆಯ ಉಗ್ರಾಣಕ್ಕೆ ಬೆಂಕಿ ಹಚ್ಚಿದಲ್ಲದೆ ಸಾಮಾನುಗಳನ್ನು ಅಪಹರಿಸಿಕೊಂಡು ಹೋದದ್ದನ್ನು ಕಂಡು ಡೆಪ್ಯುಟಿ ಕಮಿಶನರರು ಪೋಲೀಸದಲದಿಂದ ಪರಿಸ್ಥಿತಿಯನ್ನು ಹಿಡಿತದಲ್ಲಿ ತಂದರು. ಗಲಭೆ ನಡೆದಾಗ ಒರ್ವ ರಾಜಕೀಯ ಕೈದಿಯು ಇನಸ್ಪೆಕ್ಟರ ಜನರಲ್ಲರ ಮೇಲೆ ಚೂರಿಯನ್ನು ಎಸೆಯಲು ಪ್ರಯತ್ನಿಸಿದನು. ಅದು ಸಾಧ್ಯವಾಗಲಿಲ್ಲವಾದರೂ ಇನ್ಸ್ಪೆಕ್ಟರ ಜನರಲ್ಲರ ಕೈಗೆ ಒಂದು ಬಡಿಗೆಯ ಏಟು ಬಿತ್ತು.

'ಮುಸ್ಲಿಂಲೀಗ ಚಳವಳಿಯು ಕೊಳ್ಳೆ, ಕೊಲೆ ಸುಲಿಗೆ ಮೊದಲಾದ ಹಿಂಸಾಚಾರಗಳಲ್ಲಿ ಮಾತ್ರ ಯಶಸ್ವಿಯಾಗಿದೆ. ಪ್ರಾಂತೀಯ ಸರಕಾರದ ಸಾಮರ್ಥ್ಯ ಕುಗ್ಗಿಸಲು ಅದರಿಂದಾಗಿಲ್ಲ' ಎಂದು ಗಡಿನಾಡ ಸರಕಾರದ ಕಂದಾಯ ಮಂತ್ರಿಗಳಾದ ಅಶಾ ಉಲ್ಲಾ ಖಾನರು ಸುದ್ದಿಗಾರರ ಸಭೆಯಲ್ಲಿ ಹೇಳಿದ್ದಲ್ಲದೆ ಕಾಂಗ್ರೆಸ್ಸಿನ ೧೯೪೨ ರ ಅಗಸ್ಟ ಚಳವಳಿಗೂ ಸದ್ಯದ ಮುಸ್ಲಿಂಲೀಗ ಚಳವಳಿಗೂ ಇರುವ ತಾರತಮ್ಯದ ಕಡೆಗೆ ಬೆರಳು ಮಾಡಿ ಅವರು ಕಾಂಗ್ರೆಸ್ಸಿನ ಕಾಯದೆಭಂಗ ಚಳವಳಿಯು ಸತ್ಯ ಅಹಿಂಸೆಗಳಿಗನುಗುಣವಾಗಿ ಬ್ರಿಟಿಶ ಸಾಮ್ರಾಜ್ಯಶಾಹಿಯ ವಿರುದ್ಧ ನಡೆದಿದ್ದರೆ ಸದ್ಯದ ಲೀಗಿನ ಚಳವಳಿಯು ಹಿಂಸಾಚಾರದಿಂದ ಕೂಡಿ ಸಾಹಸಪದ್ಧತಿಯಿಂದ ಗೊಂದಲ ಹಾಕುವದನ್ನೇ ಉದ್ದೇಶವಾಗಿಟ್ಟುಕೊಂಡು ಸಾಗುತ್ತಿದೆಯೆಂದು ವಿವರಿಸಿದರು.

## ಬುಂದೆ ಪ್ರಸ್ತದ ಪಂಚನಾಮೆ

ಪುಣೆಯ ನಗರಾಧ್ಯಕ್ಷರಾದ ಶ್ರೀ ಬಾಬುರಾವ ಸಣಸರವರು ತಮ್ಮ ಅಧಿಕಾರಾವಧಿ ಮುಗಿದುದರ ನಿಮಿತ್ತವಾಗಿ ಸಹಾಯಕ ವರ್ಗದವರಿಗೆ ತಮ್ಮ ಹಳ್ಳಿಯಿಂದ ವಡಗಾವಿಯಲ್ಲಿ ಬುಂದೆ ಉಂಡಿಯ ಭೋಜನ ಸಮಾರಂಭವನ್ನೇರ್ಪಡಿಸಿದ್ದರು. ಭೋಜನಕ್ಕೆ ಆನರರಿ ಮ್ಯಾಜಿಸ್ಟ್ರೇಟರು, ಹಿಂದಿನ ನಗರ ಸಭಾಧ್ಯಕ್ಷರು ಮೊದಲಾದ ಸುಮಾರು ೨೫೦ ಗಣ್ಯ ವ್ಯಕ್ತಿಗಳು ಹಾಜರಿದ್ದರು. ಊಟಕ್ಕೆ ಕುಳಿತಾಗ ಅಂಚೆಭಂಡಾರದ ಶಾಖೆಯ ಅಧಿಕಾರಿಗಳು ಸಶಸ್ತ್ರ ಪೋಲೀಸರೊಡನೆ ಬಾಳಿ ಮಾತ್ರ ಎತ್ತಿ ಮನ್ನಸಾರು ಬುಂದೆ ತಿನ್ನುತ್ತಿರುವದರ ಛಾಯಾಚಿತ್ರ ತೆಗೆದುಕೊಂಡು ಪಂಚನಾಮೆ ಮಾಡುತ್ತಿರುವಾಗ ಸಂಘದರು ಹಿತ್ತಲಬಾಗಿಲಿಂದ ಓಡಿಹೋದರು.

ಈ ವಾರದ ಕತೆ



# ಭಾವನಾ

ಶ್ರೀಕೃಷ್ಣ ಪಾಟೀಲ ಇವರಿಂದ

ಮುಟ್ಟು ನಿಂತ ಮೇಲೆ ಜಯಲಕ್ಷ್ಮಿಯು ಎಲ್ಲರ ನಿಂದೆಗೆ ಕಾರಣಳಾದಳು. ಪಾಪ ಅವಳ ತಪ್ಪೇನು?

ಅತ್ತೆಯ, ಮುಂಜಾನೆಯ ಉದಯ ಗೀತದ ಜೊತೆಗೆ ನಿಂದೆಯ ಸ್ತೋತ್ರದ ಹಾಡತಕ್ಕದಲ್ಲದೆ ದರೆ ಮಲಗುವ ವರೆಂದಿನ ಮಂಗಲಾರತಿಯಾ ಗುವ ವರೆಗೆ ಮುಗಿಯುತ್ತಿರಲಿಲ್ಲ. ಈ ಮರ್ಮಾಂತಿಕ ಮಾತುಗಳನ್ನು ನುಂಗಿ ನುಂಗಿ ಜಯಲಕ್ಷ್ಮಿಯು ದಿನಗಳನ್ನು ನೂಕಿಕೊಂಡು ಬಂದಿದ್ದಳು. ಚೊಚ್ಚಲ ಸಂಭ್ರಮದ ಬಯಕೆ, ತಿನಿಸು, ಅರ್ಸಿಕೆಗಳೆಲ್ಲ ಅರು ಮಕ್ಕಳ ಬಸುರಿನಲ್ಲಿ ನೆನಪಾಗಿ ಉಳಿದು ಎಷ್ಟೋ ಸೊಗವನ್ನು ತರುತ್ತಿದ್ದವು. ಆದರೆ ಇಂದಿನ ಈ ಏಳನೆಯ ಸರದಿಗೆ ಅವೆಲ್ಲವುಗಳು ನಿಂದೆಯ ನುಡಿಗಳಾಗಿ ಜೀವವನ್ನೇ ಕೊಲ್ಲುವಂತಾದವು.

ಒಂದು ದಿನ ಮಧ್ಯಾಹ್ನ ಕೆಲಸವನ್ನು ಮುಗಿಸಿ ಪಡಸಾಲೆಯಲ್ಲಿ ಎಲೆ ಹಚ್ಚುತ್ತ ಕುಳಿತಿದ್ದರು. ನೆರೆಮನೆಯ ಕೆಲ ವೃದ್ಧೆಯರು ನೆರೆದರು. ಪರಟೀಕೆ, ಪರ ನಿಂದೆ ಟಿಪ್ಪಣಿಗಳಾದ ಮೇಲೆ ಒಬ್ಬಳು ಒಡೆದ ತಂಬೂರಿಯ ತಂತಿಗಳನ್ನು ಮೀಟಿ ರಾಗ ತೆಗೆಯುವಂತೆ—

"ಅಜ್ಜೀ, ನಿಮ್ಮ ಸೊಸೆಗೆ ಎಷ್ಟು?" ಎಂದಳು.

"ಅಂದರೇನೆ?" ಅಜ್ಜಿ ದನಿ ಎತ್ತಿದಳು.

"ಅಯ್ಯ! ಎಷ್ಟರೊಳಗೆ ಎಂದು ಕೇಳುವಳು ಅಜ್ಜೀ!" ಎಂದು ಇನ್ನೊಬ್ಬಳು ಮಲ್ಲಿನಾಥಿ ಮಾಡಿದಳು.

"ಅದನ್ನು ಎಣಿಸಿ ಕೊಟ್ಟಲೆಕ್ಕ ಹೊಸ ಚೆಟ್ಟು ಕಟ್ಟಬೇಕಾಗಿದೆ ಏನೇ?

"ಹೊಸ ಚೆಟ್ಟು ತರದಿದ್ದರೂ ಹಳೆಯ ತಗಡುಗಳನ್ನು ಓದಿಸಬಾರದೇ ಅಜ್ಜೀ?"

"ತಗಡುಗಳಗೂ ಗೊತ್ತು ಲೀಲಿ! ಯಾವ ನಾಡಿಯಲ್ಲಿ ಎಂಥ ರಕ್ತ ಹರಿಯುವದೆಂಬುದು! ಆರು ಪಿಳ್ಳೆಗಳ ರಕ್ತ ಕುಡಿದು ನಾಲಗೆಯು ಸವುಳೇರಿ ಹೋಗಿದೆ. ಆ ಸವುಳೇರಿದ ನಾಲಗೆಗೆ ರುಚಿ ತಂದುಕೊಳ್ಳಲು ಮನೆ ತುಂಬ ಹರಡಿ ನಮ್ಮನ್ನೂ ಕಡಿಯುವವು. ರಕ್ತ ಹೀರುವ ಮುಂದಿನ ವೇದನೆಯ ಸೊಲ್ಲಿನಲ್ಲಿ ಅಡಗಿದ ದುಃಖವನ್ನು ಅರಿಯದುಂಟೇ?"

ಎಲ್ಲ ವೃದ್ಧೆಯರೂ ಕಿಲಕಿಲನೆ ನಕ್ಕರು.

ಜಯಲಕ್ಷ್ಮಿಯು ಎಲೆ ಹಚ್ಚುತ್ತ ಕೆಳಗೆ ಹಾಕಿದ ಮುಖವನ್ನು ಮೇಲೆತ್ತಲಿಲ್ಲ.

"ಅದು ಯಾರ ಕೈಯಲ್ಲುಂಟು ಅಜ್ಜಿ?" ಎಂದು ಕುಸುಮಕ್ಕ ಮತ್ತೆ ವಿಷಯವನ್ನು ಮುಂದುವರಿಸಿದಳು.

"ಅದು ಯಾರ ಕೈಯಲ್ಲಿಲ್ಲದಿದ್ದರೂ ಇನ್ನೊಂದು ನಮ್ಮ ಕೈಯಲ್ಲುಂಟಲ್ಲ ಕುಸುಮಾ!"

"ಅಂದರೇನೇ ಅಜ್ಜಿ?" ಒಂದಿಷ್ಟು ಚಿಕ್ಕವಳು ಬಾಯಿಬಿಟ್ಟಳು.

"ಅರು ದಿನಊಟ ಮಾಡಿ ಏಳನೆಯ ದಿನ ಶನಿವಾರ ನನ್ನ ಮಗ ಉಪವಾಸ ಮಾಡುವವನು, ನಾನು ಕಣ್ಣಿಂದ ೧೦—೧೨ ವರುಷ ನೋಡುತ್ತ ಬಂದಿರುವ ಇದನ್ನು ಹೇಗೆ ಮರೆಯಲಿ!"

"ಸೊಸೆಯೂ ಉಪವಾಸ ಮಾಡುವವಳಲ್ಲ!"

"ಅಯ್ಯೋ; ಶೇಷ ಭೋಜನವು ಊಟವೆನಿಸದಿದ್ದರೆ ಉಪವಾಸವೆನ್ನಬೇಕು ಬಿಡು..."

"ತಿಳಿಯಿತೇ ಜಯಲಕ್ಷ್ಮೀ!" ಎಂದು ಒಬ್ಬ ವೃದ್ಧೆ ಹಲ್ಲುಕಿರಿದಳು.

"ಕಕ್ಕೀ, ಹೆಂಗಸಾದವರಿಗೆ ಇಷ್ಟೂ ತಿಳಿಯದುಂಟೇ?" ಜಯಲಕ್ಷ್ಮಿಯ ದನಿಯಲ್ಲಿ ಸಂತಾಪವಿದ್ದಿತು.

"ಅಹುದು. ಅರುಮಕ್ಕಳ ಸಾಕ್ಷಿಯಿಂದಲೇ ಇವಳಿಗೆ ಹಂಗಸೆಂದು ಕರೆಯಬೇಕು. ಬಲವಾದ ಉದಾಹರಣೆ..."

"ಕಕ್ಕೀ, ನಾನು ಯಾವ ದೇವರಿಗೂ ಹೂವೇರಿಸಿಲ್ಲ. ದೀಪ ಹಚ್ಚಿಲ್ಲ. ಮಕ್ಕಳು! ಎಂಬ ದನಿ ಎತ್ತಿಲ್ಲ. ಒಲ್ಲೆಂದು ನೂರು ಸಾರಿ ಹರಕೆ ಹೊತ್ತರೂ ಕೊಟ್ಟಿರುವ. ಇನ್ನು ಅತ್ತೆಯವರ ಮಾತಿನಂತೆ ಹರಿದು ಒಗೆದರೆ ಸರಿ. ಆದರೆ ಆ ಪಾಪಕ್ಕೆ ನಾನೇ ಹಿಲ್ಲಬೇಕಾಗುವದೆಂದು ಹೆದರಿರುವೆ."

"ಆಯಿತು, ಆ ಪಾಪಕ್ಕೆ ಈ ಮಾತು ಉತ್ತರವಾದರೆ ಸರಿ ಹೊಂದೀತೇನೇ?"

"ಉಂಡು ತಿಂದು ಓಡಾಡುವ ಆರು ಮಕ್ಕಳುಂಟು. ಕುಸುಮಕ್ಕ, ದೇವರು ನೋಡಿ ನಲಿಯಲು ನನಗೆ ಮಕ್ಕಳನ್ನು ಕೊಟ್ಟಿಲ್ಲ. ಎದೆಯ ಮೇಲೆ ಅರು ಬಂಡೆಗಳೇ ಸರಿ. ನನಗೆ ಅದರ ಅರಿವಿಲ್ಲವೆನ್ನುವೆಯಾ? ಅರು ಮಕ್ಕಳ ಧರ್ಮ ಸೆರೆ ಬಿಡಿಸಲು ಎಷ್ಟು ಅಶ್ವಮೇಧ ಯಜ್ಞ ಮಾಡಬೇಕಾಗುವದೆಂಬುದೂ ಗೊತ್ತಿದೆ. ಅದಕಲಂಕ ಏಳನೆಯದೊಂದನ್ನು ಇರಿಸಲು ಹೇಗೆ ಒಪ್ಪಲಿ? ಆದರೂ ಧರ್ಮಕ್ಕೆ ಸೋತು ಇರಿಸಲು ಸಿದ್ಧಳಾಗಿರುವೆ. ಅದು ಯಾರ ತಪ್ಪು? ನನ್ನದೇ ಎಂದು ಅತ್ತೆಯವರು ನುಡಿದರೆ ನನಗೆ ಬೇರೆ ಮಾತು ಹೇಳಲು ದಾರಿಯುಂಟೇ?" ಎಂದು ಕಣ್ಣೀರು ತೊಡೆದುಕೊಂಡಳು.

"ಹೋಗಲಿ ಬಿಡು ಜಯಲಕ್ಷ್ಮೀ!" ಒಬ್ಬ ವೃದ್ಧೆ ನುಡಿದಳು.

"ಇಂದಿನ ತರುಣಿಯರಂತೆ ಒಂದು ಉಪಾಯ ಹೊಳೆಯುತ್ತದೆ ಕಕ್ಕೀ. ಹಳೆಯ ಕಾಲದ ನಮಗೆ ಅದೆಲ್ಲ ಹೊಸದೆನಿಸಿದರೂ ಆಶ್ರಯಿಸಬೇಕೆಂದಿರುವೆ. ಆದರೆ ಅದರ ಉತ್ತರ ಫಲವು ಇದಕ್ಕೂ ಹೆಚ್ಚಾಗಿ ಮಾನಗೇಡಿಯಾದರೆ ಏನು ಮಾಡಬೇಕು? ದೇವರು ನನ್ನನ್ನು ಇಂಥ ಸತ್ವಪರೀಕ್ಷೆಗೆ ಗುರಿಮಾಡಿದರೆ ಹೇಗೆ ಸಹಿಸಲಿ? ಉಳಿದ ನಾಲ್ಕಾರು ತಿಂಗಳಲ್ಲಿ ಮರಣ ಒದಗಿದರೆ ನಾನು ಸಂತೋಷದಿಂದ ಬರಮಾಡಿಕೊಳ್ಳುವೆ. ಯಾವ ಆಸೆಯನ್ನಿಟ್ಟುಕೊಳ್ಳದೆ ಸಾಯಬೇಕೆಂದಿರುವೆ ಕಕ್ಕೀ..."

ಎಲ್ಲರೂ ಸುಮ್ಮನಿದ್ದರು.

ಬಂದ ದುಃಖವನ್ನು ಒಂದಿಷ್ಟು ತಡೆಹಿಡಿದು, "ಈಗ ನೀವು ಕೂಡಿಕೊಂಡು ಎಷ್ಟೇ ನಿಂದಿಸಿದರೂ ಸರಿ. ಸತ್ತ ಮೇಲೆ ಮುತ್ತೈದೆ, ಸತ್ತಳು, ಎನ್ನುವಿರಿ ಆ ನನ್ನ ಅರು ಮಕ್ಕಳು ಹೆಣದ ಸುತ್ತುವರಿದು ಆಕ್ರೋಶಿಸಿದುವದನ್ನು—ನಾನರಿಯದಿದ್ದರೂ—ಇಷ್ಟು ಮಕ್ಕಳು, ಗಂಡ, ಅತ್ತೆಯವರ ನಡುವೆ ಸತ್ತ ಸೌಭಾಗ್ಯವತಿ ಎಂದು ಮರುಕದ ದನಿಯನ್ನು ತೆಗೆಯದೆ ಇರಲಾರಿರಿ.

"ಅದೇ ನನ್ನ ಪಾಲಿನ ಸೌಖ್ಯವೆನ್ನುವೆ. ಸ್ವರ್ಗದಲ್ಲಿ ಎಲ್ಲಿಯಾದರೂ ಒಂದು ತಿಂಡಿಯಿದ್ದರೆ ಹಣಿಕಿಕ್ಕಿ ನೋಡಿ ಸಂತೋಷಪಡುವೆ. ಮರಣಾನಂತರ ನನ್ನ ಪಾಲಿಗೆ ಉಳಿದ ಅದೊಂದೇ ಸುಖ" ಎಂದು ಹನಿಗೂಡಿದ ಕಣ್ಣುಗಳನ್ನು ತೊಡೆದುಕೊಂಡಳು.

"ಮುದುಕಿಯ ಕೊರಳಿಗೆ ಆ ತೊಳೆದ ಹುಳಗಳನ್ನು ಕಟ್ಟಿ ಸಾಯಬೇಕೆಂದರೆ ನಡೆದೀತೇ? ಸಾವು ನಮ್ಮ ಕೈಯೊಳಗಿನದೇ? ಸಾಕು" ಅಜ್ಜಿ ಮೂಗು ಹಿಗ್ಗಿಸಿ ವಟಗುಟ್ಟಿದಳು.

"ನನಗೆ ಅದೇ ಕಣ್ಣ ಮುಂದೆ ಕಟ್ಟಿದೆ ಕಕ್ಕೀ." ಕಣ್ಣು ಇನ್ನೂ ಹಸಿ ಇದ್ದವು.

"ಏನಾದರೇನು? ದಿನತುಂಬಲು ಮುದುಕಿ ಮತ್ತೆ ಟೊಂಕ ಕಟ್ಟಬೇಕು. ಓಡಾಡಬೇಕು. ಅದೇನು ಬಿಟ್ಟಿದಲ್ಲ."

"ಬಾಯಿ ಬಾಯಿ ತಿವಿಸಿಕೊಳ್ಳಬೇಕು."

"ಅದೇಕೆ ಅಜ್ಜೀ? ಹಿರಿಯ ಮಗಳು ಬೇಕಾದಹಾಗೆ ನೆರವಾಗಬಹುದು," ಕುಸುಮಕ್ಕ ನುಡಿದಳು.

"ಅಯ್ಯ! ಪುಸ್ತಕದಿಂದ ಮುಖ ಮೇಲೆತ್ತಿ ಊಟಕ್ಕೆ ಬಂದರೆ ಅಷ್ಟೇ ಸಹಾಯ ಸಾಕು ಎನ್ನುವೆ. ಇನ್ನು ಬೇರೆ ಸಹಾಯದ ಮಾತು ಬೇಡ."

× × ×

ದಿನವೂ ಒಂದಿಲ್ಲೊಂದು ಬಗೆಯ ಇಂಥದೇ ಹರಟೆ. ಈ ಅಜ್ಜಿಯರ ಹರಟೆಯ ಕಟು ನುಡಿಗಳಿಂದ ಜಯಲಕ್ಷ್ಮಿ ತನ್ನ ಪ್ರಜ್ಞೆಯನ್ನು, ವಿವೇಕವನ್ನು, ತಾಳ್ಮೆಯನ್ನು ಕಂಪಕಂಪ ಕಳೆದುಕೊಂಡಳು. ಮೇಲೆ ಗಂಡನೂ ಒಂದೆರಡು ಸಾರೆ "ಪತ್ನಿ ನೀನು ರೂಪಾಯಿಯ ಧಾರೆ ಕಾಯ್ದು, ಇಂಥ ದಿವಸವಾದವಳ್ಳಿ," ಎಂದು ಅಡ್ಡು ಬಿಟ್ಟು. ಆಮೇಲೆ ಮನೆಯೇ ವಿಚಿತ್ರ ಮೇಲೆ ಬಿದ್ದರೆ ರಕ್ಷಣೆ. ತೊರೆಯುವ ಯಾರ ಮೇಲೆ ಹಾಂಟೆ ಇ.?

ಜಯಲಕ್ಷ್ಮಿ ಊಟಕ್ಕೇಳಲು, ಮುಖದ ತುಂಬ ಚಿಂತೆಯನ್ನು ಬಳಿದುಕೊಂಡಳು, ತಲೆಯ ತುಂಬ ಕಲ್ಪನೆಯನ್ನು ಕಟ್ಟಿಕೊಂಡಳು. ಮನೆಯ ಯಾವ ಕೆಲಸವೂ ಸೊಗಸಿಲ್ಲ. ಉಂಡೂ ಉಂಡಾಸವಿಲ್ಲದರೂ ಹೃದಯದಲ್ಲಿ ರಕರಕಿ ಮಕ್ಕಳ, ಸಣ್ಣ ದಾಕನ್ನು ಎರಡು ಸಾರೆ ಉಚ್ಚರಿಸಿದರೆ ಗಂಟಲು ಹಾಸಿಕೊಳ್ಳುವಳು. ಒಂದಿಷ್ಟು ಕೆಲಸ ಹಚ್ಚಿದ ದಿನ ಮನಸಿಗೆ ತೀರ ಜುಗುಪ್ಸೆಗೊಂಡು, ಹೀರು ನೆಲಗಳನ್ನು ಸಂಬೋಧಿಸಿ "ಮರಣವಿದ್ದರೆ ತೀರ ಬೇಗ ಬರಲಿ" ಎಂದು ಕೂಗುವಳು. "ಯಮನ ಯಾದಿಯಲ್ಲಿ ನನ್ನ ಹೆಸರು ಇರದೆ? ಮರೆತಿರುವನೇ"? ಎಂದು ಅನವರತ ಕೂಗುವಳು "ದೇವರೇ ನನ್ನನ್ನು ಮರೆತೆಯಾ?" ಎಂದು ಮೊರೆಯಿಡುವಳು. ಏನಾದರೇನು, ದಿನಗಳು ಉರುಳಿದವು. ತಿಂಗಳುಗಳು ತುಂಬಿದವು. ನವಮಾಸ ತುಂಬಿ ಒಂದು ದಿನ ಹಾಸಿಗೆಯನ್ನು ಹಿಡಿದಳು ಸಾವು ಮಾತ್ರ ಇನ್ನೂ ಬರಲಿಲ್ಲ. ಆಕೆಯ ಯಾತ್ರೆಯೋ ಒಂದು ವಿಶ್ವಾಸದ ಉಸಿರನ್ನು ಎಳೆಯುತ್ತಿದ್ದಿತು.

ಹಗಲು ರಾತ್ರಿ ಹೆರಿಗೆಗಾಗಿ ಜಯಲಕ್ಷ್ಮಿ ತೊಳಲಿದಳು. ಯಾವ ಫಲವೂ ಕಂಡುಬರಲಿಲ್ಲ. ಮನೆಯವರು ಚಿಂತೆಗೊಳಗಾದರು. ವೈದ್ಯರನ್ನು ಕರೆದರು. ಸೂಲಗಿತ್ತಿಯು ಅಲ್ಲಿಂದ ಸರಿದಾಡಿರಲಿಲ್ಲ. ಜಯಲಕ್ಷ್ಮಿಯು ಕಲ್ಲಿನ ಪ್ರತಿಮೆಯಂತೆ ಕಣ್ಣು ಸೀಳಿಸುತ್ತಿದ್ದಳು. ಅವಳು ತನ್ನ ಅಂತರಾತ್ಮನು ವಂಚಿಸಲಾರನೆಂದು ದೃಢವಾಗಿ ನಂಬಿದ್ದಳು. ಒಂದೆರಡು ಸಾರೆ ಮೂರ್ಛೆಯನ್ನು ಸಂದು ಸಾವಿನ ರುಚಿಯನ್ನೂ ಉಂಡಿದ್ದಳು. ಸರಿ. ಇನ್ನೊಂದು ದಿನ ಹೋದರೆ ನಾಳೆ ಸರಿಯಾಗಿ ನನಗೆ ಮರಣ. ಎಲ್ಲ ಜಂಜಾಟದಿಂದ ಮುಕ್ತಳು. ಸ್ವರ್ಗದ ತಿಂಡಿಯಲ್ಲಿ ನಿಂತು ಮಕ್ಕಳ ರೋದನವನ್ನು ನೋಡುವ ಸೌಭಾಗ್ಯ ಪ್ರಾಪ್ತಿ" ಎಂದು ಏನೇನೋ ಹಳೆಯ ಸ್ಮೃತಿಗಳನ್ನು ಗುಣಿಸಿ ಕಲೆಯನ್ನು ಶಾಂತವಾಗಿರಿಸಿಕೊಂಡಿದ್ದಳು. ಆದರೂ ಯಾವ ಫಲವನ್ನೂ ಹೊಂದಲಿಲ್ಲ. ವೈದ್ಯರು, ಇಂದು ರಾತ್ರಿ ಹೆರಿಗೆಯಾಗದಿದ್ದರೆ ಪ್ರಸಂಗ ವಿಪರೀತವೆಂದು ನುಡಿದು ಮನೆಗೆ ಹೋದರು.

ಈಗ ಜಯಲಕ್ಷ್ಮಿಯ ಗುಣ ಪ್ರಶಂಸೆ, ಶಾಂತವೃತ್ತಿಯ ಗುಣಗಾನ, ಮನೆವಾಳ್ತೆಯ ಜಾಣತನ- ಒಬ್ಬೊಬ್ಬರ ಬಾಯಲ್ಲಿ ಒಂದೊಂದು ಬಗೆಯಾಗಿ ಸುಳಿಯಬೇಕೆಂದವು.

ಗಂಡನು ಮಂಗನಂತೆ ಮನೆತುಂಬ ಕುಣಿದಾಡಹತ್ತಿದನು. ಅವನಿಗೆ ಒಳಗಿನ ಸಾಮಾನುಗಳ ಅಣಿಮಾಡಬೇಕೋ, ಹೊರಗಿನ ಸಾಮಾನುಗಳ ಸಿದ್ಧತೆಮಾಡಬೇಕೋ ತಿಳಿಯದಾಯಿತು.

ಅತ್ತೆಯು ಯಾವ ದೇವರ ಹರಕೆ ಹೊರಲಿ? ಎಂದು ವಿಚಾರಿಸುತ್ತಿದ್ದಳು.

ಮಕ್ಕಳು ಒಂದೊಂದು ಮೂಲೆಯನ್ನು ಆಶ್ರಯಿಸಹತ್ತಿದವು.

ಜಯಲಕ್ಷ್ಮಿಯು ಸಾವು ಸಮೀಪಕ್ಕೆ ಬಂದಿತೆಂದು ಹರಿಯಿಸಿಕೊಳ್ಳಹತ್ತಿದಳು.

ಜಯಲಕ್ಷ್ಮಿಯು ತಾನು ಸ್ವರ್ಗದ ಅಧಿಕಾರಿಣಿಯೆಂದು ಹಿಗ್ಗಿದಳು. ಬದುಕುವಂತಿಲ್ಲ ತಿಳಿದುಕೊಂಡಳು.

ಅಜ್ಜಿಯು ಒಬ್ಬ ಕರೆಯುಗಿತ್ತಿ ಬುದ್ಧಿಯನ್ನು ಕೇಳಿದಳು, ಓಡಿಬಂದಳು. ಆಕೆಯು ಅಜ್ಜಿಯ ಸ್ವಭಾವವನ್ನು ಜಯಲಕ್ಷ್ಮಿಯ ಸಾವು ತಿಳಿದು ಬಲ್ಲವಳು. ಜಯಲಕ್ಷ್ಮಿಯ ಸಾವಿಗೆ ಮೂಲ ಕಾರಣವನ್ನು ಅರಿತವಳು. ಆಕೆಯ ಸಾಕ್ಷಿಯ ಮುಂದೆ ಇದೆಲ್ಲ ವ್ಯರ್ಥ. ತನ್ನ ವ್ಯವಹಾರ ಸರಿಯೆಂದು ಬಗೆದಳು.

ಜಯಲಕ್ಷ್ಮಿಯ ಸ್ಥಿತಿಯನ್ನು ನೋಡಿ ಅವಳ ಮರುಗಾಳು ಹೆರಿಗೆಯಾದರೆ ಬದುಕುವಳೆಂಬ ವಿಶ್ವಾಸ ಮಾತ್ರ ಅವಳಿಗೆ ಇದ್ದಿದ್ದಿತು. ಬೆಟ್ಟಗೆ ಜಯಲಕ್ಷ್ಮಿಯು ಕೋಣೆಗೆ ಹೋಗಿ ಹತ್ತಿರ ಕುಳಿತು ಮೈಮೇಲೆ ಕೈಯಾಡಿಸಿದಳು. ಒಂದಿಷ್ಟು ಪ್ರಜ್ಞೆ ಬಂದಿತು. ಆಕೆಯು ಹರಿಗೆ ಬಾಯನ್ನು ಬಿಡುವದು "ಲಕ್ಷ್ಮೀ! ಏನಿದು! ಏಕೆ ಮುಚ್ಚಿ ನಾಚಿಕೆ ಪಡುವೆ. ಹೊಟ್ಟೆ ತುಂಬಿಸಿಕೊಂಡು ಏಕೆ ಕೊಳಲಾದೀ? ಏಳು. ಉಗುಳಿ ಬಿಡು. ರಾಘವೇಂದ್ರ ಗುರುವೇ, ಉಗುಳಿಬಿಡು. ಉಗುಳಿಹಾಕು" ಎಂದು ಏನೇನೋ ನುಡಿದಳು.

ಒಂದರ್ಧ ತಾಸಿನಲ್ಲಿ ಕೂಸಿನ ಅಳುವೇ ಕೇಳಿ ಬಂದಿತು.

"ಅಜ್ಜೀ, ಗಂಡು ಮಗ" ಕೋಣೆಯಿಂದ ಸೂಲಗಿತ್ತಿ ಕೂಗಿದಳು.

ಅಜ್ಜಿಯು ಹುಡುಗರಂತೆ ದೇವರ ಮನೆಗೆ ಓಡಿ ಕೈ ಜೋಡಿಸಿ ನಿಂತಳು. ತಿರುಗಿ ಕೋಣೆಗೆ ಬಂದು "ಜಯಾ ಸುಖವಾಗಿರುವಳೇ? ಹಾಲು ಮರೆಸಿ ತರಲೇ?" ಎಂದು ಬೇರೆಗೆ ಅರಿವೆಯನ್ನು ಸುತ್ತಿಕೊಳ್ಳಹತ್ತಿದಳು.

"ಏನಾಯಿತು ಅಜ್ಜೀ?" ಸೂಲಗಿತ್ತಿ ಕೇಳಿದಳು.

"ದೇವರ ಮುಂದೆ ತುಪ್ಪದ ದೀಪ ಹಚ್ಚುವಾಗ್ಗೆ ಬೆರಳು ಸುಟ್ಟುಕೊಂಡೆ...ಸೋದಾ..." ಎಂದು ಮಗನನ್ನು ಕೂಗಿದಳು.

"ಏನಮ್ಮ ಪೇಟೆ ಕರೆಲು ಹೊರಟಿರುವೆ?"

ಮುದುಕಿ ಬಟ್ಟಲಬಾಯನ್ನು ಬಿಟ್ಟು, ಆ ಸಹಾಯ ಗತ್ತಲೆಯ ಕೋಣೆಯೊಳಗಿನ ನೋವಿನ ನರಳನ್ನು ಹೀರು ತುಂಬಿದ ಕಣ್ಣುಗಳನ್ನು ತೇಲಿಸಿಕೊಂಡು ನೋಡುವ ತವಕದಲ್ಲಿ ಬಾಗಿಲಲ್ಲಿ ನಿಂತಿದ್ದಳು!

## ೫ ಪ್ರಶ್ನೆಗಳು



೫ ಪ್ರಶ್ನೆಗಳನ್ನು ಬರೆದು ಅವರ ನಲ್ಲಿಟ್ಟು ಸೀಲ್ ಮಾಡಿ ಕಳುಹಿಸಿದರೆ ದೇವೀ ಮಹಿಮೆಯಿಂದ ಉತ್ತರ ರೂಪದಲ್ಲಿ ಭವಿಷ್ಯ ಬರೆದು, ಅದೇ ಪಿಮ್ಮ ಕವರಿನೊಂದಿಗೆ ರೂ. ೩ಕ್ಕೆ ವಿ. ಪಿ. ಮಾಡಲಾಗುವದು.

ಸಿದ್ಧಾಂತಿ ಎಂ. ಆರ್. ಸುಬ್ಬಯ್ಯಾ,
ನಂ. ೧೨, ಕೆಂಚನಾಯಕನಗಲ್ಲಿ
ಗಾಣಗರಪೇಟೆ, ಬೆಂಗಳೂರು ಸಿಟಿ

